ಮುದ್ರಕರು:-
ನಾರಾಯಣ ಬಾಗಲವಾಡಿ
[illegible]ನ ಮುದ್ರಣಾಲಯ
ಧಾರವಾಡ

ಅಧ್ಯಾತ್ಮ ಕಾರ್ಯಾಲಯ
ಧಾರವಾಡ
ತಾ. ೬-೬-೧೯೩೫

ಪ್ರಕಾಶಕರು:-
ಶ್ರೀ. ಬೋಧರಾವ ರಾಮಚಂದ್ರ ದಿವಾಕರ
ಅಧ್ಯಾತ್ಮ ಕಾರ್ಯಾಲಯ
ಧಾರವಾಡ

# ಮುನ್ನುಡಿ

ಇದೊಂದು ದೊಡ್ಡ ವಿಷಯವನ್ನು ಕುರಿತು ಬರೆಯಲ್ಪಟ್ಟ ಚಿಕ್ಕ ಉಪನ್ಯಾಸವು. ಇದರ ಇತಿಹಾಸವು ಸ್ವಲ್ಪ ಮನೋರಂಜಕವು.

೧೯೩೨-೩೪ರಲ್ಲಿ ಹಿಂಡಲಗಿ ಸೆರೆಮನೆಯಲ್ಲಿರುವಾಗ ನನಗೆ ಮುಂಬಯಿಯ ಪ್ರಸಿದ್ಧ ಕಾಂಗ್ರೆಸ ಕಾರ್ಯಕರ್ತರಾದ ಶ್ರೀ. ಮಥುರಾದಾಸ ತ್ರಿಕಮಜಿಯವರ ಪರಿಚಯವಾಯಿತು. ಅವರು ಒಳ್ಳೇ ಗೀತಾಭ್ಯಾಸಿಗಳು. ಅವರೊಡನೆ ಗೀತೆಯನ್ನು ಕುರಿತು ಚರ್ಚಿಸುವಾಗ, ಲೋಕಮಾನ್ಯ ಟಿಳಕರ ಜ್ಞಾನಭಾಂಡಾರವಾದ 'ಗೀತಾರಹಸ್ಯ' ಮತ್ತು ಮಹಾತ್ಮಾ ಗಾಂಧಿಯವರ ಜೀವನರಹಸ್ಯವನ್ನೊಳಗೊಂಡ 'ಅನಾಸಕ್ತಿಯೋಗ' ಈ ಗ್ರಂಥಗಳ ಆಧಾರದಿಂದ ಕರ್ಮಯೋಗವನ್ನು ಕುರಿತು ಒಂದು ಚಿಕ್ಕ ಉಪನ್ಯಾಸವನ್ನು ಬರೆಯುವುದು ಅವಶ್ಯವೆಂದು ಕಂಡಿತು. ಯಾರು ಬರೆಯಬೇಕು ಎಂಬ ಮಾತು ಹೊರಟು, ಅವರು ಮೊದಲು ಗುಜರಾಥಿಯಲ್ಲಿ ಬರೆಯಬೇಕು, ನಾನು ಅದನ್ನು ಕನ್ನಡಿಸಬೇಕು, ಎಂದು ಗೊತ್ತಾಯಿತು. ಬರೆಯುವಾಗ ನಮ್ಮಿಬ್ಬರ ನಡುವೆ ಪ್ರತಿನಿತ್ಯ ಚರ್ಚೆಯು ನಡೆಯುತ್ತಲೇ ಇತ್ತು.

ಈ ಪ್ರಕಾರ ಇದು ಮೊದಲು ಗುಜರಾಥಿಯಲ್ಲಿಯೆ ರಚಿತವಾಗಿ ೧೮-೪-೩೪ರಲ್ಲಿ ಪ್ರಕಟವಾಯಿತು. ಅದನ್ನು

ಕನ್ನಡಿಸಿ ನಾನು ಈಗ ಪ್ರಕಟಿಸುತ್ತಿರುವೆನು. ಇದನ್ನು ನಾನು ಸೆರೆಮನೆಯಲ್ಲಿ ಕನ್ನಡಿಸುತ್ತಿರುವಾಗ ನನ್ನೊಡನೆ ಇದ್ದ ಪಾಟೀಲ ಮಲ್ಲನಗೌಡರು, ಡಾ. ಜಠಾರರು, ದೊಡ್ಡ ಮೇಟಿ ಅನ್ನದಾನೆಪ್ಪನವರು, ಪಾಟೀಲ ಕೆ. ಎಸ್‌ರು, ಶೇಣ್ಯೈ ಶಾಮರಾಯರು ಮುಂತಾದವರು ಓದಿ ತಮ್ಮ ಸಮಾಧಾನ ವನ್ನು ವ್ಯಕ್ತಗೊಳಿಸಿದರು. ಅವರು ಕೊಟ್ಟ ಪ್ರೋತ್ಸಾಹದ ಮೂಲಕ ಇದನ್ನು ನಾನು ಅಚ್ಚುಹಾಕಿಸಲು ಸಿದ್ಧನಾದೆನು.

ಶ್ರೀ. ಮಥುರಾದಾಸ ತ್ರಿಕಮಜಿಯವರು ತಮ್ಮ ಮೂಲ ಗುಜರಾಥಿ ಪುಸ್ತಕಕ್ಕೆ ಬರೆದ ಪ್ರಸ್ತಾವನೆಯ ಭಾಷಾಂತರವನ್ನು ಇದರಡಿಯಲ್ಲಿ ಕೊಟ್ಟಿರುವೆನು. ಆ ಪ್ರಸ್ತಾವನೆಯು ಈ ಪುಸ್ತಕದ ಹುಟ್ಟು, ಉದ್ದೇಶ, ಪದ್ಧತಿ ಇವುಗಳನ್ನು ಕುರಿತು ಓದುಗರಿಗೆ ಅಲ್ಪಪರಿಚಯವನ್ನು ಮಾಡಿಕೊಡುವುದು:—

## ‘ ಕರ್ಮಯೋಗ ’ ನಿಬಂಧವನ್ನು ಕುರಿತು

ನಾನು ೧೯೩೨–೩೩ರಲ್ಲಿ ಹಿಂಡಲಗಿ ಸೆರೆಮನೆಯಲ್ಲಿರುವಾಗ ‘ ಕರ್ಮಯೋಗ ’ ನಿಬಂಧದ ಕಲ್ಪನೆಯು ಮೊದಲು ಉದಯ ಹೊಂದಿತು ಹಾಗೂ ಅದರ ರಚನೆಯು ಅಲ್ಲಿಯೇ ಆಯಿತು. ಕರ್ನಾಟಕದ ಪ್ರಸಿದ್ಧ ಕಾರ್ಯಕರ್ತರೂ ಗೀತಾಪ್ರೇಮಿಗಳೂ ಆದ ದಿವಾಕರ ರಂಗರಾಯರು ಇದರ ಪ್ರೇರಕರೂ ನಿಮಿತ್ತ ಕಾರಣರೂ ಇರುವರು.

ಗೀತೆಯ ನಿವೃತ್ತಿಪರ ಅರ್ಥವನ್ನು ಹೇಳುವ ಗ್ರಂಥ ಗಳು ಹೇರಳವಾಗಿರುವವು. ನಿಜವಾಗಿ ಗೀತೆಯ ಮೂಲ

ಹಾಗೂ ಸರಲ ಅರ್ಥವು ಪ್ರವೃತ್ತಿಪರವಿರುವದು. ಆದರೆ ಕಾಲವಶಾತ್ ಈಗ ಅಂಥ ಅರ್ಥವುಳ್ಳ ಗ್ರಂಥಗಳು ದೊರೆಯುವದು ದುರ್ಲಭವು. ವರ್ತಮಾನಕಾಲದಲ್ಲಿ ಲೋಕಮಾನ್ಯ ಬಾಳ ಗಂಗಾಧರ ಟಿಳಕರವರು 'ಗೀತಾರಹಸ್ಯ'ವನ್ನು ಬರೆದು ಪ್ರವೃತ್ತಿಪರ ಅರ್ಥವನ್ನು ಪ್ರಚಾರಕ್ಕೆ ತಂದಿರುವರು. ಗಾಂಧೀಜಿಯವರ ಜೀವನ ಸಂದೇಶವೂ ಅದೇ ಅರ್ಥವನ್ನು ಸೂಚಿಸುವದು. ಆ ಅರ್ಥವನ್ನೇ ಸ್ಪಷ್ಟೀಕರಿಸುವ ಪ್ರಯತ್ನವು ಈ ನಿಬಂಧದಲ್ಲಿ ಮಾಡಲ್ಪಟ್ಟಿದೆ. ಇದರ ಬರವಣಿಗೆಯು ಸೆರೆಮನೆಯಲ್ಲಿಯೆ ಸಂಪೂರ್ಣವಾಯಿತು.'

**ಮಥುರಾದಾಸ ತ್ರಿಕಮಜಿ**

ಈ ಪುಸ್ತಕದಲ್ಲಿ ವ್ಯಕ್ತಮಾಡಿದ ವಿಚಾರಗಳು 'ಗೀತಾರಹಸ್ಯ' ಹಾಗೂ 'ಅನಾಸಕ್ತಿಯೋಗ' ಇವುಗಳಲ್ಲಿಯುವೆ ಇರುವವು ಹಾಗೂ ಅವು ವಿಚಾರಾರ್ಹವಿರುವವು ಎಂಬುದನ್ನು ವಾಚಕರು ಲಕ್ಷ್ಯದಲ್ಲಿಡತಕ್ಕದ್ದು.

ಕರ್ಮಯೋಗದ ದಿವ್ಯ ಸಂದೇಶವನ್ನು ತಿಳಿದುಕೊಳ್ಳಲು ಈ ಸಣ್ಣ ಪುಸ್ತಕವು ಕನ್ನಡಿಗರಿಗೆ ಸಹಾಯ ಮಾಡುವದೆಂದು ನಂಬಿ ಈ ಮುನ್ನುಡಿಯನ್ನು ಮುಗಿಸುವೆನು.

ಜ್ಯೇಷ್ಠ ೧೮೫೭<br>೬-೬-'೩೫<br>ಧಾರವಾಡ

**ರಂಗನಾಥ ರಾಮಚಂದ್ರ ದಿವಾಕರ**

# ಅನುಕ್ರಮಣಿಕೆ

# ಕರ್ಮಯೋಗ

## ೧ ಶ್ರೀಮದ್ಭಗವದ್ಗೀತೆ

### ೧ ಗೀತೆಯ ಮಹಿಮೆ

ಪರ್ವತಗಳಲ್ಲಿ ಉತ್ತುಂಗ ಹಿಮಾಚಲದಂತೆ, ಜೀವನ ದಾಯಿಯಾದ ನದ-ನದಿಗಳಲ್ಲಿ ಪವಿತ್ರ ಗಂಗೆಯಂತೆ, ಬೆಳಗುವ ಜ್ಯೋತಿಗಳಲ್ಲಿ ಭಗವಾನ್ ಸೂರ್ಯನಂತೆ, ಶ್ರೀಮದ್ಭಗವದ್ಗೀತೆಯು ಧಾರ್ಮಿಕ ಗ್ರಂಥಗಳಲ್ಲಿ ಒಂದು ಅದ್ವಿತೀಯವಾದ ಗ್ರಂಥವಿರುವದು. ಇದು ಪ್ರಾಣಿಮಾತ್ರರ ಧ್ಯೇಯವಾದ ಆತ್ಮ ಸುಖವನ್ನು ದೊರಕಿಸುವ ಸುಲಭ ಮತ್ತು ಸರಲ ಯುಕ್ತಿಯನ್ನು ಮೃದುಮಧುರ ವಾಣಿಯಿಂದ ಹೇಳುವ ಅನುಪಮ ಕಾವ್ಯವು. ಇದನ್ನು ಸರಿಗಟ್ಟುವ ಗ್ರಂಥವು ಇನ್ನೊಂದಿಲ್ಲವೆಂದು ಅನ್ನಬಹುದು. ಗೀತಾ ಗೀತೈವ–ಗೀತೆಗೆ ಗೀತೆಯದೇ ಉಪಮೆ–ಎಂದು ಗೀತಾಭ್ಯಾಸಿಗಳು ಅನ್ನುವದು ಯಥಾರ್ಥವು. ಚಿಕ್ಕದಾದರೂ ಈ ಮಹಾಗ್ರಂಥವು ಅಷ್ಟು ಅತುಲನೀಯವಿರುವದು.ಕರ್ತವ್ಯಮೂಢನಾಗಿ ಧರ್ಮಸಂಕಟಕ್ಕೊಳಗಾದ ಅರ್ಜುನನಿಗೆ ಯೋಗೇಶ್ವರ ಶ್ರೀಕೃಷ್ಣನು ಈ ಗ್ರಂಥದಲ್ಲಿ ಆತ್ಮಸುಖದ ಜ್ಞಾನವನ್ನೂ ಅದರೊಡನೆ ಭಕ್ತಿಪೂರ್ವಕವಾಗಿ ಸ್ವಕರ್ಮ ಮಾಡುವ ಯೋಗವನ್ನೂ . ಅರ್ಥಾತ್ ನಿಷ್ಕಾಮಕರ್ಮಯೋಗವನ್ನೂ ಆ ಯೋಗವನ್ನು ಸಾಧಿಸುವ

ಉಪಾಯವನ್ನೂ ಉಪದೇಶಿಸಿರುವನು. ಶ್ರೀಕೃಷ್ಣನು ಇಲ್ಲಿ, ಪ್ರಪಂಚ ಮತ್ತು ಸ್ವಕರ್ಮ ಇವುಗಳನ್ನು ತ್ಯಜಿಸದೆ ಸಂಸಾರ ದಲ್ಲಿಯೆ ಇದ್ದು ಸ್ವಕರ್ಮವನ್ನು ಮಾಡುತ್ತಿರುವಾಗಲೆ ಮನುಷ್ಯನು ಆತ್ಮಸುಖದಲ್ಲಿ ನಿತ್ಯ ನಿಮಗ್ನನಾಗಿರುವ ಸುಂದರ ಕಲೆಯನ್ನು ಬೋಧಿಸಿ, ಪರಮಪದವಿಯನ್ನು ಪಡೆ ಯುವ ಉತ್ತಮ ಹಾದಿಯನ್ನು ಮನುಷ್ಯಮಾತ್ರರಿಗೆ ತೋರಿಸಿರುವನು.

### ೨ ಗೀತೆಯ ಹೆಸರು ಮತ್ತು ಅದರ ವಿಷಯವು

ಗೀತೆಯ ಪೂರ್ಣ ಹೆಸರು 'ಶ್ರೀಮದ್ಭಗವದ್ಗೀತೋಪ ನಿಷತ್' ಎಂದು ಇರುವದು. ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ 'ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ' ಈ ಸಂಕಲ್ಪವಿದ್ದು ಆ ಬಳಿಕ ಆಯಾ ಅಧ್ಯಾಯದ ಮುಖ್ಯ ವಿಷಯಕ್ಕನುಸರಿಸಿ ಆ ಅಧ್ಯಾಯದ ಹೆಸರು ಇರುವದು. ಈ ಸಂಕಲ್ಪದಲ್ಲಿ, ಗ್ರಂಥದ ಪೂರ್ಣ ಹೆಸರು ಮತ್ತು ಗ್ರಂಥ ವಿಷಯ, ಇವು ಅಸಂದಿಗ್ಧವಾಗಿ ಉಲ್ಲೇಖಿಸಲ್ಪಟ್ಟಿವೆ. ಬ್ರಹ್ಮ ಜ್ಞಾನವೆ ಅಥವಾ ಅಧ್ಯಾತ್ಮಜ್ಞಾನವೆ ಗೀತೆಯ ತತ್ವಜ್ಞಾನವು ಮತ್ತು ಯೋಗವೆ ಅರ್ಥಾತ್ ನಿಷ್ಕಾಮ ಕರ್ಮಯೋಗವೆ ಅದರ ಪ್ರಾಪ್ತಿಯ ಸಾಧನವು ಎಂಬುದು ಈ ಸಂಕಲ್ಪದಿಂದ ವ್ಯಕ್ತವಾಗುವದು. ನಮಗೆ ತತ್ವಜ್ಞಾನದ ಪರಿಚಯವನ್ನು ಮಾಡಿಕೊಡುವ ವೇದಭಾಗಗಳಿಗೆ ಉಪನಿಷತ್ ಎಂಬ ಹೆಸರು ಇರುವದರಿಂದ ಗೀತಾಗ್ರಂಥದಲ್ಲಿಯ ತತ್ವಜ್ಞಾನವೂ ಉಪ

ನಿಷತ್ತುಗಳ ಆಧಾರದಿಂದಲೆ ಹೇಳಲ್ಪಟ್ಟಿದೆ ಎಂಬುದು ಈ ಹೆಸರಿನಿಂದ ಸ್ಪಷ್ಟವು. ಈ ಜ್ಞಾನವನ್ನು ಹೇಳುವವನು ಭಗವಾನ್ ಶ್ರೀಕೃಷ್ಣನಿರುವುದರಿಂದ 'ಶ್ರೀಮದ್ಭಗವದ್ಗೀತಾಸು' ಎಂಬ ವಿಶೇಷಣವು ಈ ಉಪನಿಷತ್ತಿಗೆ ಹಚ್ಚಲ್ಪಟ್ಟಿದೆ. ಸನ್ಮಾನಾರ್ಥವಾಗಿ ಗೀತಾ ಮತ್ತು ಉಪನಿಷತ್ತು ಈ ಎರಡೂ ಶಬ್ದಗಳು ಬಹುವಚನದಲ್ಲಿವೆ. ಆದರೆ ರೂಢಿಯಲ್ಲಿ ಈ ಉದ್ದವಾದ ಹೆಸರಿನ ಸಂಕ್ಷೇಪವಾಗಿ, ಹಿಂದಿನ ಮುಂದಿನ ಪದಗಳು ಅಡಗಿ, ಗೀತಾ ಎಂಬ ಚಿಕ್ಕ ಮಾಟಾದ ಹೆಸರೇ ಪ್ರಚಲಿತವಾಗಿದೆ.

**೩ ಗೀತೆ ಮತ್ತು ಮಹಾಭಾರತದಲ್ಲಿಯ ನಾರಾಯಣೀಯ ಉಪಾಖ್ಯಾನವು**

ಗೀತೆಯು ಮಹಾಭಾರತದ ಭೀಷ್ಮಪರ್ವದಲ್ಲಿ ಅಧ್ಯಾಯ ೨೫ ರಿಂದ ೪೨ ರ ವರೆಗೆ ಇರುವದು. ಮಿಕ್ಕ ಪರ್ವಗಳಲ್ಲಿಯೂ ಅದರ ಉಲ್ಲೇಖವಿರುವದು. ಶಾಂತಿಪರ್ವದ ನಾರಾಯಣೀಯ ಉಪಾಖ್ಯಾನದಲ್ಲಿರುವ ಗೀತೆಯ ಉಲ್ಲೇಖವು ಎಲ್ಲಕ್ಕೂ ಮಹತ್ವದ್ದು, ಯಾಕಂದರೆ ಗೀತಾತಾತ್ಪರ್ಯವನ್ನು ತಿಳಿದುಕೊಳ್ಳಲಿಕ್ಕೆ ಅದು ಬಹಳ ಸಹಾಯಕವು. 'ಭಗವಂತನು ಹಾಡಿದ ಉಪನಿಷತ್ತು' ಎಂಬ ಹೆಸರನ್ನು ಪರೀಕ್ಷಿಸಿದರೆ ಗೀತೆಯಲ್ಲಿಯ ಧರ್ಮವು ಭಗವಂತನು ಪ್ರವೃತ್ತ ಮಾಡಿದ ಭಾಗವತಧರ್ಮವು ಮತ್ತು ಈ ಧರ್ಮದಲ್ಲಿಯ ಶ್ರೀಕೃಷ್ಣನಿಗೆ ಭಗವಾನ್ ಎಂಬ ಬಿರುದು ಕೊಡಲ್ಪಟ್ಟಿತು ಎಂಬುದು ಸ್ಪಷ್ಟವಾಗುವದು.(ಭಾಗವತಧರ್ಮವೆ ಬೇರೆ ಕಾರಣಗಳ ಮೂಲಕ ನಾರಾಯಣೀಯಧರ್ಮ, ಏಕಾಂತಿಕಧರ್ಮ, ಪಾಂಚರಾತ್ರಧರ್ಮ, ಸಾತ್ವತಧರ್ಮ ಎಂಬ ಹೆಸರುಗಳಿಂದ ಪ್ರಸಿದ್ಧವಿರು

ವನು. ಇಲ್ಲಿ ಭಾಗವತಧರ್ಮವೆಂದರೆ ಭಾಗವತಪುರಾಣದಲ್ಲಿ ಹೇಳಿದ ಧರ್ಮವೆಂದು ತಿಳಿಯಕೂಡದು. ಈ ಪುರಾಣವೂ ಒಂದು ಬಗೆಯಿಂದ ಭಾಗವತಧರ್ಮದ್ದಿರುವದು. ಆದರೆ ಮೂಲ ಭಾಗವತಧರ್ಮವು ಪ್ರವೃತ್ತಿಪರವಿತ್ತು. ಮುಂದೆ ಅದಕ್ಕೆ ಭಾಗವತ ಪುರಾಣದಲ್ಲಿ ಮತ್ತು ತದನಂತರ ಭಕ್ತಿಪರ ನಿವೃತ್ತಿಮಯ ಸ್ವರೂಪವು ಬಂದಿತು. ಗೀತಾಧರ್ಮವು ಪ್ರವೃತ್ತಿಪ್ರಧಾನವಾದ ಮೂಲ ಭಾಗವತಧರ್ಮದ ಅನುವಾದವನ್ನೆ ಮಾಡುತ್ತಿರುವುದರಿಂದ ಗೀತೆಯ ನಂತರ ರಚಿಸಲ್ಪಟ್ಟ ನಿವೃತ್ತಿಪ್ರಧಾನವಾದ ಭಾಗವತ ಪುರಾಣವು ಗೀತಾಧರ್ಮವನ್ನು ತಿಳಿದುಕೊಳ್ಳಲು ವಿಶೇಷ ಸಹಾಯಮಾಡಲಾರದೆಂಬುದು ಸ್ಪಷ್ಟವಿದೆ). ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವು ಭಗವಂತನಿಂದ ವಿವಸ್ವಾನನಿಗೆ, ಅವನಿಂದ ಮನುರಾಜನಿಗೆ, ಅವನಿಂದ ಇಕ್ಷ್ವಾಕು ಅರಸನಿಗೆ ಹೇಳಲ್ಪಟ್ಟಿತು ಎಂಬ ಪರಂಪರೆಯು ಗೀತೆಯ ನಾಲ್ಕನೆಯ ಅಧ್ಯಾಯದ ಆರಂಭದಲ್ಲಿದೆ.ನಾರಾಯಣೀಯ ಉಪಾಖ್ಯಾನದಲ್ಲಿಯೂ ಭಾಗವತ ಧರ್ಮದ ಇದೇ ಪರಂಪರೆಯು ಕೊಡಲ್ಪಟ್ಟಿರುವದು ಮತ್ತು ಅಲ್ಲಿ 'ಹರಿಗೀತೆ' ಎಂದು ಗೀತೆಯ ಉಲ್ಲೇಖವಿರುವದು. ಇದರಿಂದ ಗೀತೆಯ ಉಪದೇಶವೂ ನಾರಾಯಣೀಯ ಧರ್ಮದ ಉಪದೇಶವೂ ಭಾಗವತ ಧರ್ಮವೂ ಒಂದೇ ಇರುವವೆಂದು ನಿಃಶಂಕವಾಗಿ ಕಂಡು ಬರುವದು.

### ೪ ನಾರಾಯಣೀಯ ಧರ್ಮದ ರಹಸ್ಯವು

## ಉಪಾಖ್ಯಾನದಲ್ಲಿ ಆ ಧರ್ಮದ ಲಕ್ಷಣವು

ನಾರಾಯಣಪರೋ ಧರ್ಮಃ ಪುನರಾವೃತ್ತಿದುರ್ಲಭಃ
ಪ್ರವೃತ್ತಿಲಕ್ಷಣಶ್ಚೈವ ಧರ್ಮೋ ನಾರಾಯಣಾತ್ಮಕಃ ॥

ಮ. ಭಾ. ಶಾಂತಿ. ೩೪೭. ೮೦.

ಎಂದು ಕೊಡಲ್ಪಟ್ಟಿದೆ. ಅರ್ಥಾತ್ ನಾರಾಯಣ ಪರಾಯಣತೆಯನ್ನು ಬೋಧಿಸುವ ಈ ಧರ್ಮವು ನಾರಾಯಣಾತ್ಮಕವೆಂದು,ಪುನರ್ಜನ್ಮವನ್ನು ಹಿಂಗಿಸಿಬಿಡುವಂತಹದೆಂದು ಮತ್ತು ಪ್ರವೃತ್ತಿಲಕ್ಷಣವುಳ್ಳದ್ದೆಂದು ಇಲ್ಲಿ ಹೇಳಿದೆ. ಒಡೆದು ಹೇಳಬೇಕಾದರೆ, ಕರ್ಮ ಮಾಡುತ್ತಲೆ ಇದ್ದರೂ ಕರ್ಮ ಪ್ರವೃತ್ತನಿದ್ದರೂ ಮನುಷ್ಯನು ಮುಕ್ತಿಯನ್ನು ಪಡೆಯಬಲ್ಲನು, ಎಂಬುದು ನಾರಾಯಣೀಯಧರ್ಮದ ಮುಖ್ಯ ಉಪದೇಶವಿರುವದು. ಮೇಲೆ ಹೇಳಿದಂತೆ ನಾರಾಯಣೀಯ ಧರ್ಮ ಮತ್ತು ಗೀತೋಕ್ತ ಉಪದೇಶ ಇವೆರಡೂ ಒಂದೇ ಇರುವದರಿಂದ ಗೀತೆಯೂ ಪ್ರವೃತ್ತಿಪರವಿರುವದೆಂಬುದು ಸಹಜವೇ ಸಿದ್ಧವಾಗುವದು. ಮಹಾಭಾರತವೂ ಇದೇ ಮತವನ್ನು ಪ್ರತಿಪಾದಿಸುವದೆಂದು ಅದರಲ್ಲಿಯ ಅನೇಕ ವಚನಗಳಿಂದ ಸಿದ್ಧವಾಗುವದು.

### ೫ ಗೀತಾಭಾಷ್ಯಗಳು ಮತ್ತು ಟೀಕೆಗಳು

ಗೀತೆಯು ಪ್ರಮಾಣಗ್ರಂಥವಾದಂದಿನಿಂದ ಅದರ ಮೇಲೆ ಅನೇಕ ಭಾಷ್ಯಗಳೂ ಟೀಕೆಗಳೂ ಬರೆಯಲ್ಪಟ್ಟಿರುವವು. ಈಗ ಉಪಲಬ್ಧವಿರುವ ಅಂಥ ಭಾಷ್ಯ-ಟೀಕೆಗಳಲ್ಲಿ

ಶಂಕರಾಚಾರ್ಯರ ಭಾಷ್ಯವೇ ಎಲ್ಲಕ್ಕೂ ಪ್ರಾಚೀನವಿರುವದು. ಅದರಲ್ಲಿ ಶಂಕರಾಚಾರ್ಯರು ತಮ್ಮ ಪೂರ್ವಿಕರ ಭಾಷ್ಯ-ಟೀಕೆಗಳನ್ನು ಉಲ್ಲೇಖಿಸಿದ್ದಾರೆ. ಆ ಉಲ್ಲೇಖಗಳನ್ನು ನೋಡಿದರೆ ಆ ಭಾಷ್ಯಕಾರರು ಗೀತೆಯು ಪ್ರವೃತ್ತಿಪರವೆಂದು ಅಭಿಪ್ರಾಯಪಟ್ಟಿದ್ದರೆಂಬುದು ಗೊತ್ತಾಗುತ್ತದೆ. (ಭಾಷ್ಯದ ಈ ಭಾಗವನ್ನು ಟೀಕಿಸುವಾಗ ವೃತ್ತಿಕಾರರನ್ನು ಕುರಿತು ಆನಂದಗಿರಿಯು 'ಸಮುಚ್ಚಯವಾದಿಭಿಃ' ಎಂಬ ಪ್ರಯೋಗವನ್ನು ಮಾಡಿರುವನು. ಇದರ ಮೇಲಿಂದ, ಗೀತೆಯು ಜ್ಞಾನಕರ್ಮಸಮುಚ್ಚಯವನ್ನು (ಬರಿಯ ಜ್ಞಾನವನ್ನಲ್ಲ) ಪ್ರತಿಪಾದಿಸುವದೆಂದು ವೃತ್ತಿಕಾರರ ಮತವಿತ್ತೆಂಬುದು ಸ್ಪಷ್ಟವಾಗುವದು.

> ತದಿದಂ ಗೀತಾಶಾಸ್ತ್ರಂ.........ತದರ್ಥಾವಿಷ್ಕರಣಾಯಾ
> ನೇಕೈರ್ವಿವೃತ ಪದಾರ್ಥ ವಾಕ್ಯಾರ್ಥ ನ್ಯಾಯಮಪ್ಯತ್ಯಂತ
> ವಿರುದ್ಧಾನೇಕಾರ್ಥತ್ವೇನ ...........

'ಈ ಗೀತಾಶಾಸ್ತ್ರದ ಅರ್ಥವನ್ನು ಸ್ಪಷ್ಟೀಕರಿಸುವದಕ್ಕಾಗಿ ಅನೇಕ ಭಾಷ್ಯಕಾರರು ಪದ ಹಾಗು ವಾಕ್ಯಗಳ ಅರ್ಥವನ್ನು ನ್ಯಾಯಪೂರ್ವಕವಾಗಿ ಹೇಳಲು ಹೆಣಗಿದ್ದಾರೆ. ಹೀಗಿದ್ದರೂ ಅತ್ಯಂತ ಪರಸ್ಪರ ವಿರುದ್ಧ ಮತ್ತು ಅನೇಕ ಪ್ರಕಾರದ ಅರ್ಥಗಳನ್ನು ಮಾಡಿದ್ದಾರೆ.' — (ಶಾಂಕರಭಾಷ್ಯ ಉಪಕ್ರಮಣಿಕೆ) ಅರ್ಥಾತ್ ಆತ್ಮಜ್ಞಾನದ ಪ್ರಾಪ್ತಿಗಾಗಿ ಮತ್ತು ಆತ್ಮಜ್ಞಾನವಾದ ಬಳಿಕ ಕರ್ಮತ್ಯಾಗದ ಮತ್ತು ಸನ್ಯಾಸದ ಅವಶ್ಯಕತೆ ಇಲ್ಲ, ಆದರೆ ಆಜೀವನ ಸ್ವಧರ್ಮೋಕ್ತ ಕರ್ಮವನ್ನು

ನಿಷ್ಕಾಮ ಬುದ್ಧಿಯಿಂದ ಮಾಡುತ್ತಲೆ ಇರಬೇಕು,ಎಂಬುದೇ ಪ್ರವೃತ್ತಿಪರಾಯಣ ಗೀತೆಯ ತಾತ್ಪರ್ಯವು ಎಂದು ಅವರ ಮತವಿತ್ತು. ಆದರೆ ಈ ಮತವು ಶಂಕರಾಚಾರ್ಯರಿಗೆ ಮಾನ್ಯವಿರಲಿಲ್ಲ. ಕೇವಲ ಚಿತ್ತಶುದ್ಧಿಗಾಗಿ ಮಾತ್ರ ಕರ್ಮವು ಅವಶ್ಯ, ಆತ್ಮಜ್ಞಾನಕ್ಕಾಗಿ ಕರ್ಮತ್ಯಾಗವೂ ಸನ್ಯಾಸವೂ ಆವಶ್ಯಕ, ಎಂದು ಅವರ ಮತವಿರುವದರಿಂದ ಅವರು ಗೀತೆಯು ಸಂನ್ಯಾಸಪರವೆಂದು ಪ್ರತಿಪಾದಿಸಿದರು. ಅವರ ನಂತರ ರಾಮಾನುಜಾದಿ ಪಲವು ಭಕ್ತಿಪರಾಯಣ ಆಚಾರ್ಯರು ತಮ್ಮ ತಮ್ಮ ಸಂಪ್ರದಾಯುಕ್ಕನುಗುಣವಾಗಿ ಗೀತೆಯ ಅರ್ಥವನ್ನು ಮಾಡಿರುವರು ಮತ್ತು ಕೇವಲ ಭಕ್ತಿ ಮಾರ್ಗವು ನಿವೃತ್ತಿರೂಪವಿರುವದರಿಂದ ಅಖಂಡ ಕರ್ಮ ಯೋಗವನ್ನು ಸಮರ್ಥಿಸದೆ ಅವರು ತ್ಯಾಗವನ್ನೆ ಪೋಷಿಸಿರುವರು. ಆ ಆಚಾರ್ಯರ ಭಾಷ್ಯಗಳಲ್ಲದೆ ಬೇರೆ ಅನೇಕ ಟೀಕೆಗಳೂ ಅಸ್ತಿತ್ವದಲ್ಲಿರುವವು. ಅವೆಲ್ಲ ಆಯಾ ಲೇಖಕರ ಸಂಪ್ರದಾಯುಗಳನ್ನೆ ಅನುಸರಿಸಿರುವವು. ಹೀಗೆ ದಿನದಿನಕ್ಕೆ ಗೀತಾಗ್ರಂಥವು ನಿವೃತ್ತಿಪರಾಯಣವೆಂದು ಪಂಡಿತರು ತಿಳಿಯುತ್ತ ಬಂದರು ಮತ್ತು ಗೀತೆಯ ಮೂಲ ಪ್ರವೃತ್ತಿ ಲಕ್ಷಣವು ಮಾಸಿ ಅದರ ಮೇಲೆ ನಿವೃತ್ತಿಪರತೆಯ ಕಿಟ್ಟವು ಏರಿತು.

### ೬ ಗೀತೆಯು ಮತ್ತು ಪ್ರಸ್ಥಾನತ್ರಯಿಯು

ಆದರೆ ಗೀತೆಯು ಪ್ರಸ್ಥಾನತ್ರಯಿಯಲ್ಲಿಯ ಒಂದು ಗ್ರಂಥವಿರುವದೆಂಬ ಮಾತನ್ನು ವಿಚಾರಿಸಿದರೆ, ಅದು ಪ್ರವೃತ್ತಿ

ಪರವೇ ಇರುವದೆಂದು ತಿಳಿಯುವದು ಯುಕ್ತವು. ಜೀವ, ಜಗತ್, ಆತ್ಮಾ, ವ್ಯಕ್ತಿ ಮತ್ತು ಸಮಷ್ಟಿ ಮುಂತಾದವು ಗಳನ್ನು ಕುರಿತು ಗೂಢ ಮತ್ತು ಗಹನವಾದ ತತ್ವಚರ್ಚೆಯು ಉಪನಿಷತ್ತುಗಳಲ್ಲಿ ಮಾಡಲ್ಪಟ್ಟಿದೆ. ಆದರೆ ಆ ಚರ್ಚೆಯು ಬಿಡಿಬಿಡಿಯಾಗಿ ಬೇರೆ ಬೇರೆ ಕಡೆಗೆ ಇರುವದರಿಂದ ಉಪ ನಿಷತ್ತುಗಳಲ್ಲಿಯ ತತ್ವಜ್ಞಾನವು ಮಿಂಚಿನಂತೆ ಅಲ್ಲಿ ಇಲ್ಲಿ ಹೊಳೆಯುವದು. ಒತ್ತಟ್ಟಿಗೆ, ಒಮ್ಮೆಲೆ ಇಡೀ ತತ್ವ ಜ್ಞಾನವನ್ನು ಸರಲವಾಗಿ ಹೇಳುವ ಪ್ರಯತ್ನವನ್ನು ಉಪ ನಿಷತ್ಕಾರರು ಮಾಡಿಲ್ಲ. ಆದುದರಿಂದ ಬ್ರಹ್ಮಸೂತ್ರಕಾರರು ಎಲ್ಲ ಉಪನಿಷತ್ತತ್ವಜ್ಞಾನವನ್ನು ಸಂಕಲಿಸಿ, ಅದರ ಏಕ ವಾಕ್ಯತೆಯನ್ನು ಮಾಡಿ, ಒಮ್ಮೆಲೆ ಇಡೀ ತತ್ವಸ್ವರೂಪದ ದರ್ಶನವಾಗುವಂತೆ ಬ್ರಹ್ಮಸೂತ್ರಗಳನ್ನು ರಚಿಸಿರುವರು. ಉಪನಿಷತ್ತುಗಳಲ್ಲಿ ಮತ್ತು ಬ್ರಹ್ಮಸೂತ್ರಗಳಲ್ಲಿ ಬ್ರಹ್ಮ ಜ್ಞಾನಸಾಧನವೆಂದು ನಿವೃತ್ತಿಗೆ ಮಹತ್ವವು ಕೊಡಲ್ಪಟ್ಟಿದೆ. ಆದರೆ ಗೀತೆಯಲ್ಲಿ ಪ್ರವೃತ್ತಿಯು ಶ್ರೇಷ್ಠವೆಂದು ಪ್ರತಿಪಾದನ ವಿದೆ. ಆದುದರಿಂದ ನಿವೃತ್ತಿ ಮತ್ತು ಪ್ರವೃತ್ತಿ ಎಂಬ ಎರಡು ಸನಾತನ ಸಾಧನ-ಮಾರ್ಗಗಳ ಪ್ರಧಾನಗ್ರಂಥಗಳೆಂದು ಬ್ರಹ್ಮಸೂತ್ರ ಮತ್ತು ಗೀತೆ ಹಾಗೂ ಅವುಗಳ ತತ್ವ ಜ್ಞಾನಕ್ಕೆ ಆಧಾರಭೂತವಾದ ಉಪನಿಷತ್ತುಗಳು, ಹೀಗೆ ಈ ಗ್ರಂಥತ್ರಿಪುಟಿಯು 'ಪ್ರಸ್ಥಾನತ್ರಯಿ' ಎಂದು ಸರ್ವಮಾನ್ಯ ವಾಯಿತು. ಕಾಲವು ಹೋದಂತೆ ಪ್ರವೃತ್ತಿಮಾರ್ಗವು ಸ್ವತಂತ್ರವೆಂಬುದು ಲುಪ್ತವಾಗಿ ಅದು ನಿವೃತ್ತಿಮಾರ್ಗದ

ಪೂರ್ವ ಅಂಗವೆಂದು ಮಾಡಲ್ಪಟ್ಟಿತು ಮತ್ತು ಈ ಧೋರಣ ಕ್ಕನುಸರಿಸಿ ಗೀತೆಯ ಅರ್ಥವನ್ನು ನಿವೃತ್ತಿಪರ ಮಾಡುವ ಪದ್ಧತಿಯು ಪ್ರಚಲಿತವಾಯಿತು. ಗ್ರಂಥತ್ರಿಪುಟಿಯ ಮೂಲ ಸ್ವರೂಪವು ಮರೆಯಾಗಿ ಮೂರು ಗ್ರಂಥಗಳು ಆತ್ಮಜ್ಞಾನ ವನ್ನು ಮತ್ತು ತತ್ಸಾಧನವಾದ ನಿವೃತ್ತಿಯನ್ನೆ ಹೇಳುವವು ಎಂದು ಪ್ರತಿಪಾದಿಸುವ ರೂಢಿಯಾಯಿತು. ನಿಜವಾಗಿ ನೋಡಿದರೆ ಆಧ್ಯಾತ್ಮಿಕ ಸಿದ್ಧಿ-ಸಾಧನಗಳ ಏಕವಾಕ್ಯತೆಯನ್ನು ಮಾಡುವದು ತ್ರಯಿಯ ಉದ್ದೇಶವಿದ್ದಿಲ್ಲ. ಬ್ರಹ್ಮಜ್ಞಾನದ ಎರಡು ಸ್ವತಂತ್ರ ಸಾಧನಗಳನ್ನು ಹೇಳುವದೇ ಅದರ ಉದ್ದೇಶ ವಿತ್ತು. ಉಪನಿಷತ್ ಮತ್ತು ಬ್ರಹ್ಮಸೂತ್ರ ಇವುಗಳಿಗಿಂತ ಬೇರೆ ಮತ್ತು ವಿಶೇಷವಾದುದು ಗೀತೆಯಲ್ಲಿ ಏನೂ ಇಲ್ಲದೆ ಹೋಗಿದ್ದರೆ ಅದನ್ನು ಪ್ರಸ್ಥಾನತ್ರಯಿಯಲ್ಲಿ ಸೇರಿಸುವದು ನಿರರ್ಥಕ ಮತ್ತು ಅನವಶ್ಯಕವೇ ಸರಿ. ಪ್ರವೃತ್ತಿಪರ ಉಪದೇಶ, ಆಜೀವನ ನಿಷ್ಕಾಮ ಕರ್ಮ, ಇದು ಗೀತೆಯ ವಿಶೇಷವಿರುವುದರಿಂದ ಆ ಗ್ರಂಥಕ್ಕೆ ತ್ರಯಿಯಲ್ಲಿ ಸ್ಥಾನವು ದೊರೆಯಿತೆಂದು ಹೇಳುವುದೆ ಯೋಗ್ಯವು.

### ೭ ಗೀತೆಯ ಸರಲ ಅರ್ಥವನ್ನು ಮಾಡುವ ರೀತಿ

ಗೀತೆಯ ಮೂಲ ಮತ್ತು ಪ್ರಮಾಣಭೂತವಾದ ಉಪದೇಶವೇನು ಇದನ್ನು ತಿಳಿದುಕೊಳ್ಳಲಿಕ್ಕೆ ಈಗ ಉಪಲಬ್ಧ ವಿದ್ದ ಭಾಷ್ಯ ಟೀಕಾದಿಗಳು ವಿಶೇಷ ಸಹಾಯಮಾಡಲಾರವು ಎಂಬುದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುವದು. ಆದರೆ ಗೀತೆಯು ಸೂರ್ಯನಂತೆ ಸ್ವಯಂಪ್ರಕಾಶಿಯು.

ಗೀತಾರ್ಥಕ್ಕಾಗಿ ಗೀತೆಯನ್ನವಲಂಬಿಸುವುದೆ ಉತ್ತಮವು. ಗ್ರಂಥತಾತ್ಪರ್ಯವನ್ನು ನಿರ್ಣಯಿಸುವದರಲ್ಲಿ ಮೀಮಾಂಸಕರು ಕುಶಲರೆಂದು ಮೊದಲಿನಿಂದ ಪ್ರಸಿದ್ಧರು. ಅವರ ಪದ್ಧತಿಯು ಸರ್ವಮಾನ್ಯವಿತ್ತು ಮತ್ತು ಇಗ್ಯೂ ಇದೆ. ಯಾವ ಮತದ ಪಕ್ಷವನ್ನೂ ಹಿಡಿಯದೆ ಅವರು ವಿಚಾರಿಸುತ್ತಿದ್ದರು. ತಾತ್ಪರ್ಯನಿರ್ಣಯದ ಅಂಥ ಪದ್ಧತಿಯೇ ಈಗಾದರೂ ಇಷ್ಟವು. ಹೆಸರುಗೊಂಡು ಆ ಪದ್ಧತಿಯನ್ನರಿಯದವರು ಕೂಡ ಆ ರೀತಿಯಿಂದಲೆ ವಿಚಾರಮಾಡಬೇಕಾಗುತ್ತಿದೆ. ಆ ರೀತಿಯು ಸಾಂಪ್ರದಾಯಿಕವಿಲ್ಲ. ಆ ಪದ್ಧತಿಯಿಂದ ವಿಮರ್ಶಿಸಿದರೆ ಗೀತಾರ್ಥವು ನಮಗೆ ಸರಲವೂ ಸುಗಮವೂ ಆಗುವದು. ಮೀಮಾಂಸಕರ ಗ್ರಂಥನಿರೀಕ್ಷಣ ಪದ್ಧತಿಯು ಈ ರೀತಿ ಹೇಳಲ್ಪಟ್ಟಿದೆ—

> ಉಪಕ್ರಮೋಪಸಂಹಾರೌ ಅಭ್ಯಾಸೋಽಪೂರ್ವತಾ ಫಲಮ್ ।
> ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥

ಗ್ರಂಥತಾತ್ಪರ್ಯವನ್ನು ನಿಶ್ಚಯಿಸುವಾಗ ಗ್ರಂಥದಲ್ಲಿಯ ಏಳು ಮಾತುಗಳನ್ನು ನೋಡಲಿಕ್ಕೆ ಬೇಕು: (೧–೨) ಉಪಕ್ರಮ ಮತ್ತು ಉಪಸಂಹಾರ ಅಂದರೆ ಗ್ರಂಥದ ಆದಿ ಮತ್ತು ಅಂತ; (೩) ಅಭ್ಯಾಸ ಅಂದರೆ ಗ್ರಂಥದಲ್ಲಿ ಪುನಃ ಪುನಃ ಒತ್ತಿ ಹೇಳಿದ ವಿಷಯ; (೪) ಅಪೂರ್ವತೆ ಅಂದರೆ ಗ್ರಂಥದಲ್ಲಿಯ ವಿಶೇಷತೆ, ನವೀನತೆ; (೫) ಫಲ ಅಂದರೆ ಗ್ರಂಥವಿಚಾರದ ಪರಿಣಾಮ; (೬) ಅರ್ಥವಾದ ಅಂದರೆ ಅರ್ಥವನ್ನು ಸ್ಪಷ್ಟೀಕರಿಸುವದಕ್ಕಾಗಿ ಉಪಯೋಗಿಸಲ್ಪಟ್ಟ ದೃಷ್ಟಾಂತ, ಸ್ತುತಿ

ವಚನ, ತುಲನೆ ಮುಂತಾದವು; (೭) ಉಪಪತ್ತಿ ಅಂದರೆ ವಿಷಯದ ಖಂಡನ ಮಂಡನ. ಈ ಪದ್ಧತಿಯಿಂದ ವಿಷಯಗಳ ವಿಚಾರಮಾಡಿ ಗೀತಾತಾತ್ಪರ್ಯವನ್ನು ನಿರ್ಣಯಿಸತಕ್ಕದ್ದು. ಅಂದರೆ ಅದರ ಯಥಾಯೋಗ್ಯ ನಿರ್ಣಯವಾಗುವದು.

### ೮ ಗೀತೆಯ ಭೂಮಿಕೆ

ಗೀತೆಯಂಥ ಸನ್ಮಾನ್ಯ ಗ್ರಂಥವು ಒಂದು ನಿಶ್ಚಿತ ಉದ್ದೇಶದಿಂದ ರಚಿಸಲ್ಪಟ್ಟಿರುವದು, ಅದರಲ್ಲಿ ಮೊದಲಿನಿಂದ ತುದಿಯವರೆಗೆ ಒಂದು ಅಖಂಡ ಸೂತ್ರವಿರುವದು, ಎಂಬುದನ್ನು ಯಾರೂ ಅಲ್ಲಗಳೆಯರು. ಆದುದರಿಂದ ಈ ಗ್ರಂಥ ರಚನೆಯ ಪ್ರಸಂಗವನ್ನು ಸ್ವಲ್ಪ ನೋಡುವ. ಕುರುಕ್ಷೇತ್ರದ ರಣರಂಗದಲ್ಲಿ ಕೌರವ ಪಾಂಡವರ ಸೇನೆಗಳು ಯುದ್ಧೋತ್ಸುಕವಾಗಿ ಮೋಹರಿಸಿ ನಿಂತಿರುವವು. ಪಾಂಡವಪಕ್ಷದ ಮಹಾರಥಿ ಅರ್ಜುನನು ತನ್ನ ಪರಮ ಮಿತ್ರನಾದ ಶ್ರೀಕೃಷ್ಣನನ್ನು ಸಾರಥಿ ಎಂದು ಮಾಡಿಕೊಂಡಿರುವನು. ಅರ್ಜುನನ ಹೇಳಿಕೆಯ ಮೇರೆಗೆ ಶ್ರೀಕೃಷ್ಣನು ರಥವನ್ನು ಎರಡೂ ಸೇನೆಗಳ ಮಧ್ಯದಲ್ಲಿ ನಿಲ್ಲಿಸಿರುವನು. ಆಗ ಅರ್ಜುನನು ನಾಲ್ಕೂ ಕಡೆಗೆ ಆಪ್ತಬಂಧುಗಳನ್ನೇ, ಸ್ನೇಹಸಂಬಂಧಿಕರನ್ನೇ ನೋಡಿ ಅವರಲ್ಲಿ ತನ್ನ ಶತ್ರುಗಳು ಯಾರು ಇದನ್ನು ತಿಳಿಯದೆ ಹೋಗುವನು, ಅವನಲ್ಲಿ ಕರುಣೆಯು ಆವಿರ್ಭವಿಸುವದು, ಶರೀರವು ರೋಮಾಂಚಿತವಾಗುವದು, ಬಾಯಿ ಒಣಗಿ ಹೋಗುವದು, ಚಿತ್ತವು ಭ್ರಮಿಸುವದು, ತಾನು ಕಾದಬೇಕೊ ಕಾದಬಾರದೊ ಎಂಬ ಸಂಶಯವು ಅವನಲ್ಲಿ ಹುಟ್ಟುವದು. ಕುಲಕ್ಷಯವು

ಕಣ್ಣಮುಂದೆ ಕಟ್ಟಿದಂತಾಗಿ ಕ್ಷಾತ್ರಧರ್ಮದ ಬಗ್ಗೆ ಅವನ ಮನಸದಲ್ಲಿ ಬೇಸರುಂಟಾಗುವದು. ಕರ್ತವ್ಯಮೂಢನಾಗಿ ತಾನು ಯುದ್ಧಮಾಡಬಾರದೆಂದು ನಿಶ್ಚಯಿಸಿ, ಅರ್ಜುನನು ಶೋಕಸಂತಪ್ತಸ್ಥಿತಿಯಲ್ಲಿ ಕುಸಿದುಬಿದ್ದಂತೆ ರಥದಲ್ಲಿ ಕುಳಿತು ಕೊಳ್ಳುವನು. ಶ್ರೀಕೃಷ್ಣನು ಅವನನ್ನು ಪ್ರೋತ್ಸಾಹಿಸುವನು, ಅವನಿಗೆ ಅವನ ಕಡುಗಲಿತನದ ಎಚ್ಚರ ಕೊಡುವನು. ಅಪಕೀರ್ತಿಯ ಭಯತೋರಿಸುವನು, ಅವನ ಅಪಹಾಸ್ಯವನ್ನು ಮಾಡುವನು. ಇಷ್ಟಾದರೂ ಅರ್ಜುನನ ಶೋಕವು ಕಡಿಮೆಯಾಗದಿರುವದನ್ನು ನೋಡಿ ಅದು ಬಹಳೇ ಅಸಹ್ಯವಿರುವದೆಂದು ಶ್ರೀಕೃಷ್ಣನು ಗುರುತಿಸುವನು. ಸಾಮಾನ್ಯ ಉಪಾಯಗಳಿಂದ ಹಿಂಗದ ಅರ್ಜುನವಿಷಾದವನ್ನು ಅಧ್ಯಾತ್ಮ ದೃಷ್ಟಿಯಿಂದ ಕರ್ತವ್ಯವಿವೇಕವನ್ನು ಹೇಳಿ ಶ್ರೀಕೃಷ್ಣನು ಹೋಗಲಾಡಿಸುವನು. ನಿಷ್ಕಾಮಬುದ್ಧಿಯಿಂದ ಮತ್ತು ಸಾಮ್ಯಬುದ್ಧಿಯಿಂದ ಅಥವಾ ಆತ್ಮೌಪಮ್ಯ ಬುದ್ಧಿಯಿಂದ ಸತತ ಸ್ವಕರ್ಮವನ್ನಾಚರಿಸುವ ಪರಮಧರ್ಮದ ಜ್ಯೋತಿಯನ್ನು ಅರ್ಜುನನ ಅಂತಃಕರಣದಲ್ಲಿ ಜಾಗ್ರುತಮಾಡುವನು. ಈ ಉಪದೇಶವನ್ನು ಕೇಳಿ, ಕಾದಬಾರದೆಂಬ ತನ್ನ ಹಟವು ಮೋಹ ಮೂಲಕವಿತ್ತೆಂದು ಒಪ್ಪಿ ಅರ್ಜುನನು ಕೊನೆಗೆ ಜ್ಞಾನಪೂರ್ವಕ ಕರ್ಮದಲ್ಲಿ ಮತ್ತು ಕಡುತರವಾದ ಭಾರತೀಯ ಯುದ್ಧದಲ್ಲಿ ತೊಡಗುವನು.

**೯ ಈ ಪದ್ಧತಿಯಿಂದ ಕರ್ಮಯೋಗವೆ ಗೀತೆಯ ತಾತ್ಪರ್ಯವು**

ಗೀತಾಗ್ರಂಥದ ಈ ಮಹತ್ವದ ಭೂಮಿಕೆಯನ್ನು

ನಿಶ್ಚಳವಾಗಿ ಧ್ಯಾನದಲ್ಲಿಟ್ಟುಕೊಂಡು,
ತಿಯ ಪ್ರಕಾರ ಅದರ ತಾತ್ಪರ್ಯವು ಏನು, ಎಂಬುದನ್ನು ನೋಡುವದು ಅವಶ್ಯವು. ಅರ್ಜುನನು ಸ್ವಕರ್ಮದ ತ್ಯಾಗ ಮಾಡಲು ಸಿದ್ಧನಾಗುವ ಪ್ರಸಂಗದಲ್ಲಿ ಗೀತೆಯ ಆರಂಭವಾಗುವದು. ಸ್ವಕರ್ಮದ ತ್ಯಾಗವನ್ನು ಎಂದಿಗೂ ಮಾಡಕೂಡದು, ಅದನ್ನು ಆಮರಣ ನಿಷ್ಕಾಮಬುದ್ಧಿಯಿಂದ ಮಾಡುತ್ತಲೇ ಇರತಕ್ಕದ್ದು, ಎಂಬ ವಿವೇಕವು ಅರ್ಜುನನಿಗೆ ಉಂಟಾಗಿ ಅಲ್ಲಿ ಗೀತೆಯು ಮುಗಿಯುವದು. ಈ ವಿವೇಕಕ್ಕನುಸರಿಸಿ ಅರ್ಜುನನು ವಿಷಾದರಹಿತನಾಗಿ ಯುದ್ಧಕರ್ಮದಲ್ಲಿ ತೊಡಗುವನು. ಇದು ಅರ್ಜುನನ ಸಂಬಂಧದಿಂದ ಗೀತೆಯ ಫಲವಿರುವದು. ಸಂವಾದದ ನಡುನಡುವೆ ಅನೇಕ ಸಾರೆ ಶ್ರೀಕೃಷ್ಣನು ಕರ್ಮಮಾಡು ಎಂದು ತಿರುತಿರುಗಿ ಹೇಳುವನು. ತಸ್ಮಾದ್ಯುಧ್ಯಸ್ವ ಭಾರತ (೨. ೧೮) ಆದುದರಿಂದ ಅರ್ಜುನನೇ ಯುದ್ಧಮಾಡು; ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ (೩. ೧೯) ಆದುದರಿಂದ ನೀನು ಅನಾಸಕ್ತನಾಗಿ ನಿನ್ನ ಕರ್ತವ್ಯವನ್ನು ಸತತ ಮಾಡು; ಕುರು ಕರ್ಮೈವ ತಸ್ಮಾತ್ತ್ವಮ್ (೪. ೧೫) ಆದುದರಿಂದ ನೀನು ಕರ್ಮವನ್ನೆ ಮಾಡು; ಮಾಮನುಸ್ಮರ ಯುಧ್ಯ ಚ (೮. ೭) ನನ್ನನ್ನು ಸ್ಮರಿಸು ಮತ್ತು ಯುದ್ಧಮಾಡು; ಈ ಬಗೆಯ ವಚನಗಳು ಅಲ್ಲಲ್ಲಿ ಇರುವುದರಿಂದ ಗೀತೆಯಲ್ಲಿ 'ಸ್ವಕರ್ಮ ಮಾಡು' ಎಂಬ ಉಪದೇಶದ ಅಭ್ಯಾಸವಿದೆ, ಪುನರುಚ್ಚಾರವಿದೆ. ಕೇವಲ ಕರ್ಮವು ತಾನಾಗಿ ಬಂಧಮೋಕ್ಷಗಳ

ಕಾ[illegible]ಲರಿಯದು, ಆದರೆ ಯಾವ ಭಾವನೆಯಿಂದ ಆಯಾ ಕರ್ಮವು ಮಾಡಲ್ಪಡುವದೊ ಆ ಭಾವನಾನುರೂಪ ಫಲವು ದೊರಕುವದು, ನಿಷ್ಕಾಮಭಾವದಿಂದ ಮಾಡಿದ ಕರ್ಮವು ಬಂಧಕವಾಗದು, ಎಂಬುದು ಗೀತೆಯ ವಿಶೇಷವು ಅಥವಾ ಅಪೂರ್ವತೆಯು ಇರುವದು. ನಿಷ್ಕಾಮಬುದ್ಧಿಯಿಂದ ಅಥವಾ ಈಶ್ವರಾರ್ಪಣಬುದ್ಧಿಯಿಂದ ಸ್ವಕರ್ಮ ಮಾಡುವದೇ ನಿಷ್ಕಾಮ ಕರ್ಮಯೋಗವು ಮತ್ತು ಇದೇ ಗೀತೆಯ ಪ್ರತಿಪಾದ್ಯ ವಿಷಯವು. ಸನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು ಎಂದು ತೋರಿಸುವಾಗ ಸನ್ಯಾಸದ ವಿವೇಚನೆಯೂ ಅಲ್ಲಲ್ಲಿ ಬಂದಿದೆ. ಅದು ಅರ್ಥವಾದಾತ್ಮಕವು. ಮನುಷ್ಯನು ಕ್ಷಣಹೊತ್ತು ಸಹ ಕರ್ಮ ಮಾಡದೆ ಇರಲಾರನು, ಕರ್ಮದ ಸರ್ವತಃ ತ್ಯಾಗವು ಅಶಕ್ಯವು, ಕರ್ಮವು ಸ್ವತಃ ಬಂಧಕವೂ ಅಲ್ಲ ಮೋಕ್ಷದಾಯಕವೂ ಅಲ್ಲ, ಭಾವನೆಯಂತೆ ಸಿದ್ಧಿ, ಭಾವನೆಯಿಂದ ಅಕರ್ಮವು ಕರ್ಮವಾಗಬಲ್ಲದು ಮತ್ತು ಕರ್ಮವು ಅಕರ್ಮವಾಗಬಲ್ಲದು, ನಿಷ್ಕಾಮಕರ್ಮವು ಬಂಧಕವಾಗಲಾರದು, ದೇಹಾದಿ ಕರಣಗಳು ಕರ್ಮದಲ್ಲಿ ಪ್ರವೃತ್ತವಾಗಿದ್ದರೂ ತತ್ಫಲವನ್ನು ಕುರಿತು ಮನುಷ್ಯನು ಸಾಮ್ಯಬುದ್ಧಿ ರೂಪ ನಿವೃತ್ತಿಯನ್ನು ತಾಳಿದರೆ ಅವನಿಗೆ ಯಾವ ದುಃಖವೂ ಆಗದೆ ಸನ್ಯಾಸದಿಂದ ಸಿಕ್ಕತಕ್ಕ ಸಿದ್ಧಿಯೆ ಕರ್ಮದಿಂದ ಪ್ರಾಪ್ತವಾಗುವದು, ಈ ಮಾರ್ಗದಲ್ಲಿ ಮಾಡಿದ ಅಲ್ಪ ಪ್ರಯತ್ನವೂ ನಿಷ್ಫಲವಾಗದು, ಜ್ಞಾನವಾದ ಬಳಿಕ ಸಹ ಆಮರಣಾಂತ ಮಾಡತಕ್ಕ ಕರ್ಮವು ಲೋಕಸಂಗ್ರಹಾರ್ಥ

ಮತ್ತು ಅನಾಸಕ್ತವೇ ಇರುವದು, ಜನಕಾದಿ ಮಹಾಜನರು ಇದೇ ಮಾರ್ಗದಿಂದ ಸಿದ್ಧಿಯನ್ನು ಪಡೆದರು, ಆಪ್ತಕಾಮ ಶ್ರೀಕೃಷ್ಣನೂ ಇದೇ ಹಾದಿಯಿಂದ ನಡೆದನು, ಎಂಬ ಮುಂ ತಾದ ವಚನಗಳು ಗೀತೆಯಲ್ಲಿಯ ಉಪಪತ್ತಿ ಎನಿಸುವವು. ಮೀಮಾಂಸಕರ ಈ ಸರಲ ಮತ್ತು ಸಾಮಾನ್ಯ ಒರೆಗಲ್ಲಿಗೆ ಗೀತೆಯನ್ನು ಹಚ್ಚಿ ನೋಡಿದರೆ ನಿಷ್ಕಾಮಕರ್ಮಯೋಗ ಎಂಬ ಒಂದೇ ಒಂದು ತಾತ್ಪರ್ಯವು ಅದರಿಂದ ಹೊರಡು ವದು. ಅರ್ಥಾತ್ ಕಾಮ್ಯಬುದ್ಧಿಯನ್ನು ಬಿಟ್ಟು ಸಾಮ್ಯ ಬುದ್ಧಿಯಿಂದ ಆಜೀವನ ಸ್ವಕರ್ಮ ಮಾಡುತ್ತಿರಬೇಕು, ಎಂಬುದೇ ಆ ತಾತ್ಪರ್ಯವು. ಇನ್ನು ಸ್ವಕರ್ಮ ಮಾಡುವಾಗ ಯಾವ ಅಡಚಣಿಗಳು ಬರುವವು ಮತ್ತು ಅವುಗಳೊಳಗಿಂದ ಪಾರಾಗಲು ಮಾರ್ಗವೇನು, ಎಂಬ ವಿಷಯವು ಮುಂದಿನ ಪ್ರಕರಣದಲ್ಲಿ ಬಂದಿರುವದು.

## ೨ ಧರ್ಮ

### ೧೦ ಕರ್ಮಯೋಗದ ಜಿಜ್ಞಾಸೆ

ಕರ್ಮವನ್ನು ಮಾಡುತ್ತಿರುವಾಗ ಸಂಕಟಗಳು ಒದಗಿದವೆಂದರೆ ಕರ್ಮಜಿಜ್ಞಾಸೆಯು ಜಾಗೃತವಾಗುವದು. ಕರ್ಮವು ಆವುದು ಅಕರ್ಮವು ಆವುದು, ಅದನ್ನು ಮಾಡಬೇಕೋ ಇದನ್ನು ಮಾಡಬೇಕೋ, ಏನುಮಾಡಬೇಕು ಏನುಬಿಡಬೇಕು, ಎಂಬ ಸಂಶಯಗಳು ಮನಸಿನಲ್ಲಿ ಹುಟ್ಟಿದೊಡನೆ ಕರ್ಮತತ್ವವನ್ನು ತಿಳಿಯಲು ಪ್ರೇರಣೆಯಾಗುವದು. ವಿವೇಕಪೂರ್ವಕವಾಗಿ ಕರ್ಮವನ್ನು ಮಾಡಬೇಕು ಎನ್ನುವ ಪುರುಷನು ಎಷ್ಟೇ ತತ್ಪರನೂ ಪೂಜ್ಯನೂ ಇದ್ದರೂ ಅವನಿಗೆ ಕರ್ಮಾಕರ್ಮವನ್ನು ಕುರಿತು ಎಂದೆಂದಿಗೂ ಸಂದೇಹವುಂಟಾಗದು ಎಂದು ಹೇಳಲಿಕ್ಕಾಗದು. ಎಲ್ಲರಿಗೂ ಇಂಥ ಸಂಶಯದ ಪ್ರಶ್ನೆಗಳು ಎದುರಾಗಿಯೇ ಎದುರಾಗುವವು. ಭಾರತೀಯ ಯುದ್ಧದ ಆರಂಭದಲ್ಲಿ ಅರ್ಜುನನಂಥ ಕರ್ಮವೀರನು ಸಹ ಕರ್ಮಾಕರ್ಮದ ಗೊಂದಲದಲ್ಲಿ ಬಿದ್ದು ಸಂಮೂಢನಾದನು. ಅರ್ಜುನನ ಈ ಅನುಭವವು ಅಪವಾದಾತ್ಮಕವೆಂದು ಹೇಳಲಿಕ್ಕಾಗದು. ಪಂಡಿತರು ಸಹ ಕರ್ಮಾಕರ್ಮದ ತೊಡಕಿಗೆ ಒಳಗಾಗುವರು, ಎಂದು ಮೊದಲು ಹೇಳಿಯೆ ಶ್ರೀಕೃಷ್ಣನು ಅರ್ಜುನನಿಗೆ ಕರ್ಮರಹಸ್ಯವನ್ನು ತಿಳಿಸಿಕೊಟ್ಟನು. ಕರ್ಮದ ವಿಚಾರ ಮಾಡುತ್ತಿರಲು ಕರ್ಮಾಕರ್ಮದ ವ್ಯವಸ್ಥೆ ಮಾಡ

ಬೇಕಾಗುವದು, ಆ ವ್ಯವಸ್ಥೆಯು ಯಾವುದರ ಆಧಾರದಿಂದ ಮಾಡಲ್ಪಡುವುದೊ ಅದಕ್ಕೆಯೆ ಧರ್ಮವೆನ್ನುವರು. ಆದುದರಿಂದ ಕರ್ಮವಿಚಾರವು ಧರ್ಮವಿಚಾರದ ಹೊರತು ಪೂರ್ಣವಾಗಲಾರದು. ಈಗ ಧರ್ಮವೆಂದರೇನು ಇದನ್ನು ಸಂಕ್ಷೇಪದಿಂದ ನೋಡುವ.

### ೧೧ ಸಮಾಜಧಾರಣೆಯೆ ಧರ್ಮದ ಉದ್ದೇಶವು

ವ್ಯವಹಾರದಲ್ಲಿ ಎಷ್ಟೋ ಸಾರೆ ಧರ್ಮಶಬ್ದವು ಪಾರಲೌಕಿಕ ಸುಖದ ಸಾಧನವನ್ನು ಸೂಚಿಸುವದು. ಆದರೆ ಧರ್ಮದ ಅರ್ಥವು ಇಷ್ಟು ಸಂಕುಚಿತವಿಲ್ಲ. ಈ ಶಬ್ದವು ಇಹಲೋಕದ ಕರ್ತವ್ಯ, ಕರ್ಮ ಇವುಗಳ ಜ್ಞಾನವನ್ನೂ ಒಳಗೊಂಡಿದೆ, ಯಾಕಂದರೆ ಈ ಕರ್ಮಗಳ ಪರಿಣಾಮವೂ ಆತ್ಮಸುಖದ ಮೇಲೆ ಆಗಿಯೇ ಆಗುವದು. ಕುಲಧರ್ಮ, ಜಾತಿಧರ್ಮ, ಮಿತ್ರಧರ್ಮ, ಪತಿಧರ್ಮ, ರಾಜಧರ್ಮ ಮುಂತಾದ ಶಬ್ದಪ್ರಯೋಗಗಳು ಪ್ರಾಚೀನಕಾಲದಿಂದ ಪ್ರಚಾರದಲ್ಲಿವೆ. ಪ್ರಜಾಪಾಲನ, ಪಶುಪಾಲನ, ವಾಣಿಜ್ಯ, ಸೇವೆ, ಯುದ್ಧ ಮುಂತಾದ ಸಾಂಸಾರಿಕ ಕರ್ಮಗಳು ಕೂಡ ಸ್ಮೃತಿಗ್ರಂಥಗಳಲ್ಲಿ ಧರ್ಮವೆಂಬ ಹೆಸರನ್ನು ಪಡೆದಿರುವವು. ಇಂತಹ ಕಾರ್ಯವನ್ನು ಮಾಡಬೇಕು ಇಂತಹದನ್ನು ಬಿಡಬೇಕು, ಎಂಬುದನ್ನು ಸಮ್ಯಕ್ ದೃಷ್ಟಿಯಿಂದ ಚರ್ಚಿಸಿ ಮಾಡಿದ ಕರ್ಮನಿರ್ಣಯವೆ ಕರ್ತವ್ಯ ಅಥವಾ ಕರ್ತವ್ಯಕರ್ಮ ಎನಿಸುವದು ಮತ್ತು ಅದೇ ಧರ್ಮವೆಂದೂ ಎನಿಸುವದು. ವರ್ಣಾಶ್ರಮ ವ್ಯವಸ್ಥೆಯು ಪ್ರಚಾರದಲ್ಲಿರುವ ಸಮಾಜದಲ್ಲಿ

ವರ್ಣಾಶ್ರಮ ಧರ್ಮಗಳು ಅಸ್ತಿತ್ವದಲ್ಲಿರಬಹುದು. ವರ್ಣಾಶ್ರಮ ವ್ಯವಸ್ಥೆಯು ಲುಪ್ತವಾದ ಅಥವಾ ಉದ್ಭವಿಸದೆ ಇರುವ ಸಮಾಜಗಳಲ್ಲಿ ಸಹ ವ್ಯಷ್ಟಿಯು ಮತ್ತು ಸಮಷ್ಟಿಯು, ವ್ಯಕ್ತಿಯು ಮತ್ತು ಸಮಾಜದ ಕಾರ್ಯಗಳು ಆಗುತ್ತಲೇ ಇರುವವು. ಅಲ್ಲಿ ಶಿಷ್ಟರ ದೃಷ್ಟಿಯಿಂದ ನಿರ್ಣಯಿಸಲ್ಪಟ್ಟ, ಶಿಷ್ಟಸಮ್ಮತವಾದ ಕರ್ಮವೆ ಧರ್ಮವೆನಿಸುವದು. ನಮ್ಮಲ್ಲಿ ಆಧ್ಯಾತ್ಮದೃಷ್ಟಿಯೆ ಎಲ್ಲಕ್ಕೂ ಹಿತಕರವೆಂದು, ಶ್ರೇಷ್ಠವೆಂದು ಮನ್ನಿಸಲ್ಪಟ್ಟಿದೆ; ಆದುದರಿಂದ ಆ ದೃಷ್ಟಿಯ ಆಧಾರದಿಂದ ಶಿಷ್ಟರು ಮಾಡಿದ ಕಾರ್ಯಾಕಾರ್ಯದ ನಿರ್ಣಯವು ನಮ್ಮ ಸಮಾಜದಲ್ಲಿ ಶ್ರೇಷ್ಠಧರ್ಮವೆಂದು ತಿಳಿಯಲ್ಪಡುವದು. ಮಹಾಭಾರತದ ಕರ್ಣಪರ್ವದಲ್ಲಿ (೬೯. ೫೮) ಶ್ರೀಕೃಷ್ಣನು ಕೆಳಗಿನಂತೆ ಧರ್ಮಲಕ್ಷಣವನ್ನು ಹೇಳಿರುವನು:-

> ಧಾರಣಾದ್ಧರ್ಮಮಿತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ ।
> ಯತ್ಸ್ಯಾದ್ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥

(ಸಮಾಜದ) ಧಾರಣೆಮಾಡುವುದರಿಂದ ಧರ್ಮವೆನಿಸುವದು. ಧರ್ಮವು ಪ್ರಜೆಗಳ ಧಾರಣೆ ಮಾಡುವದು. ಯಾವುದರಲ್ಲಿ (ಯಾವ ಕರ್ಮದಲ್ಲಿ) ಧಾರಣೆ ಮಾಡುವ ಶಕ್ತಿ ಇರುವುದೊ ಅದು ಧರ್ಮವು, ಎಂಬುದು ನಿಶ್ಚಯವು'. ಸಮಾಜಧಾರಣೆಯೆ ಧರ್ಮದ ಹೇತುವು, ಎಂಬುದು ಈ ಉಕ್ತಿಯಿಂದ ವ್ಯಕ್ತವಾಗುವದು. ತಾತ್ಪರ್ಯವೇನಂದರೆ, ಯಾವ ಕರ್ಮವು ಅಥವಾ ಘಟನೆಯು ಕೊನೆಗೆ ವ್ಯಕ್ತಿಗೆ ಅಥವಾ ಸಮಾಜಕ್ಕೆ ಘಾತಕವೊ ಅಥವಾ ದುಃಖಪರಿಣಾಮಿಯೊ ಅದು ಅಧರ್ಮವು

ಅರ್ಥಾತ್ ತ್ಯಾಜ್ಯವು; ಯಾವುದು ಹಿತಕರವೊ ಅಥವಾ ಸುಖ ಪರಿಣಾಮಿಯೊ ಅದು ಧರ್ಮವು ಅರ್ಥಾತ್ ಕರ್ತವ್ಯವು. ಇದೇ ಅಭಿಪ್ರಾಯದಿಂದ ಮನುಧರ್ಮಶಾಸ್ತ್ರವು 'ಅಸುಖೋದರ್ಕ' (೪.೧೭೬) ಅಂದರೆ ದುಃಖಪರಿಣಾಮಿಯಾದ ಕರ್ಮವನ್ನು ತ್ಯಜಿಸಬೇಕು, ಎಂದು ಉಪದೇಶ ಮಾಡುವದು.

### ೧೨ ಸಮಾಜಧಾರಣೆಯು ಧರ್ಮದ ಉದ್ದೇಶವು ಆಜ್ಞೆಯು ಅದರ ಸ್ವರೂಪವು

ಧರ್ಮದ ಉದ್ದೇಶವು ಸಮಾಜಧಾರಣೆಯು, ಹಾಗೂ ಅದರ ಉಗಮವು ಶಿಷ್ಟಾಚಾರವು.ಮನುಷ್ಯನು ಸುಸಂಸ್ಕೃತನಾಗುವ ಪೂರ್ವದಲ್ಲಿ ಪ್ರಾಕೃತವಾದ ಕಾಡು ಅವಸ್ಥೆಯಲ್ಲಿರುತ್ತಿದ್ದನು. ಇಂಥ ಸ್ಥಿತಿಯಲ್ಲಿ ಎಲ್ಲರಿಗೂ ಸುಖವಾಗುವದು ಅಸಾಧ್ಯವು ಹಾಗು ಸಮಾಜವು ಸುವ್ಯವಸ್ಥಿತವಾಗಿ ಅಭಿವೃದ್ಧಿ ಹೊಂದುವದು ಅಸಂಭವನೀಯವು. ಆ ಸಮಯದಲ್ಲಿ ಪಾಶವೀ ಬಲದ ರಾಜ್ಯವೆ ನಡೆಯುವದು ಮತ್ತು ಸಬಲರು ಅಬಲರನ್ನು ಪತ್ತಿಕ್ಕುವರು. ಕಾಲವು ಹೋದ ಹಾಗೆ ನಿಯಮಗಳು ಅವಶ್ಯ ಎಂದು ಎಲ್ಲರಿಗೂ ಕಂಡು ಬರುವದು ಮತ್ತು ಆಯಾ ಸಂಘದಲ್ಲಿಯ ಎಲ್ಲಕ್ಕೂ ಪ್ರತಿಷ್ಠಿತ ಪುರುಷರು ಹಾಕಿದ ಕಟ್ಟುಗಳು ಲೋಕಮಾನ್ಯವಾಗುವವು. ಸ್ವೇಚ್ಛಾಚಾರದ ಬದಲು ಶಿಷ್ಟಾಚಾರವು ಸರ್ವಸಮ್ಮತವಾಗುವದು. ಈ ರೀತಿ ಶಿಷ್ಟರ ಆಚಾರವೆ ಎಲ್ಲರ ಆಚಾರವಾಗುವದು ಮತ್ತು ಆಚಾರಃ ಪರಮೋ ಧರ್ಮಃ ಅಥವಾ ಆಚಾರಪ್ರಭವೋ ಧರ್ಮಃ (ಮನು:೧. ೧೦೮.ಮ.ಭಾ. ಅನುಶಾಸನಪರ್ವ: ೧೪೯. ೧೩೭) ಸದಾಚಾರವೆ ಪರಮಧರ್ಮವು

ಅಥವಾ ಆಚಾರದಿಂದ ಧರ್ಮವು ಆವಿರ್ಭವಿಸುವದು, ಎಂಬ ವಚನವು ಸಾರ್ಥವೆನಿಸುವದು. ಆಚಾರವು ಮೊದಲು ರೂಢ ವಾಗುವದು, ಯಾವ ಆಚಾರವು ಶಿಷ್ಟವೂ ಸಮ್ಮತವೂ ಸನ್ಮಾನಿತವೂ ಆಗುವದೊ ಅದು ಧರ್ಮಪದವನ್ನು ಪಡೆಯು ವದು, ಎಂಬುದೆ ಮೇಲಿನ ವಚನದ ಭಾವಾರ್ಥವು. ಶಿಷ್ಟಾ ಚಾರಗಳೊಳಗಿಂದಲೆ ಶಾಸ್ತ್ರವು ಹುಟ್ಟುವದು, ಹೀಗಾಯಿತೆಂ ದರೆ ಧರ್ಮಕ್ಕೆ ನಿಯತ ಆಜ್ಞೆಗಳ ಸ್ವರೂಪವು ಬರುವದು. ಆದುದರಿಂದ ಚೋದನಾ ಲಕ್ಷಣೋ ಧರ್ಮಃ, ಯಾವುದು ಆಜ್ಞಾಪಿಸುವುದೊ ಅದು ಧರ್ಮವು, ಎಂದು ಅದರವ್ಯಾಖ್ಯೆಯು ಮಾಡಲ್ಪಟ್ಟಿರುವದು.

### ೧೩ ಧರ್ಮಸಂಕಟವು ಮತ್ತು ಅದರ ನಿವಾರಣವು

ಸಮಾಜಸುಧಾರಣೆಯು ಧರ್ಮದ ಹೇತುವು, ಶಿಷ್ಟಾ ಚಾರವು ಅದರ ಉಗಮವು, ಶಾಸನವು ಅಥವಾ ಆಜ್ಞೆಯು ಅದರ ಸ್ವರೂಪವು, ಎಂದು ನಿರ್ಣಯವಾದರೂ ಧರ್ಮಕರ್ಮ ಗಳ ಸಂಬಂಧದಿಂದ ಪ್ರಸಂಗವಶಾತ್ ಮನುಷ್ಯನ ಮನಸಿನಲ್ಲಿ ಉಂಟಾಗುವ ಸಂಶಯಗಳನ್ನು ತಪ್ಪಿಸಲಿಕ್ಕೆ ಮಾರ್ಗವಿಲ್ಲ. ಶಾಸ್ತ್ರವು ವಿಶಿಷ್ಟಪ್ರಕಾರದ ಕರ್ಮಗಳನ್ನು ಹೇಳಬಹುದು, ವಿಧಿನಿಷೇಧಗಳನ್ನೂ ಸಾರಬಹುದು, ಅಹಿಂಸಾ ಸತ್ಯಾಸ್ತೇಯ ಶೌಚಮಿಂದ್ರಿಯನಿಗ್ರಹಃ (ಮನು: ೧೦. ೬೩) ಅಹಿಂಸೆ, ಸತ್ಯ, ಅಸ್ತೇಯ, ಪಾವಿತ್ರ್ಯ, ಇಂದ್ರಿಯನಿಗ್ರಹ ಮುಂತಾದ ಸರ್ವ ರಿಗೆ ಸಮಾನವಾದ ಯಮನಿಯಮಗಳ ಪಾಲನವನ್ನು ವಿಧಿಸ ಬಹುದು; ಆದರೆ ಇಷ್ಟರಿಂದ ಕರ್ತವ್ಯಪಥವು ನಿಷ್ಕಂಟಕವಾಗ

ಬರಿಯದು, ಸ್ಪಷ್ಟವಾಗಲರಿಯದು. ಪ್ರತಿಯೊಂದು ವ್ಯಕ್ತಿಯ ಜೀವನದಲ್ಲಿಯ ಕಠಿಣಪ್ರಸಂಗಗಳು, ಪ್ರತಿಯೊಬ್ಬನ ಧರ್ಮ ಸಂಕಟಗಳು ಬೇರೆಬೇರೆ ಇರುವವು. ಆ ಎಲ್ಲ ಪ್ರಸಂಗಗಳಲ್ಲಿ ವಿಧಿನಿಷೇಧಾತ್ಮಕ ಶಾಸ್ತ್ರಗಳು ಎಲ್ಲರಿಗೂ ಸಹಾಯಕವಾಗ ಲಾರವು. ವ್ಯಷ್ಟಿಸಮಷ್ಟಿಗಳ, ವ್ಯಕ್ತಿಸಮಾಜಗಳ ಹಿತವನ್ನು ಸಾಧಿಸಲು ಸಮರ್ಥವಾದ ಅಹಿಂಸೆ, ಸತ್ಯ ಮುಂತಾದ ವಚನ ಗಳು ಓದಲಿಕ್ಕೆ ಎಷ್ಟು ಸುಲಭವೊ ಅಷ್ಟು ಆಚರಿಸಲು ಕಠಿಣ ವೆಂಬುದು ಅನುಭವದಿಂದ ಗೊತ್ತಾಗುವದು. ಈ ತತ್ವಗಳಂತೆ ಆಚರಿಸಲು ಯತ್ನಿಸುವವರಿಗೆ ಅನೇಕಸಾರೆ ಎಂಥೆಂಥ ತರ್ಕ ವಿತರ್ಕಗಳೂ ಸಂಶಯಗಳೂ ಉಂಟಾಗುವವು, ಇದನ್ನು ವಿಚಾರಿಸಿದರೆ ಕರ್ಮಗತಿಯು ಅತಿಗಹನವು ಎಂಬ ಗೀತಾ ವಚನದ ಪೂರ್ಣ ಸಾಕ್ಷಾತ್ಕಾರವಾಗುವದು. ಮಹಾ-ಭಾರತದ ಯುಧಿಷ್ಠಿರ-ಯಕ್ಷಸಂವಾದದಲ್ಲಿ ಯುಧಿಷ್ಠಿರನು ಎನ್ನುವುದೇನಂದರೆ,

> ತರ್ಕೋಽಪ್ರತಿಷ್ಠಃ ಶ್ರುತಯೋ ವಿಭಿನ್ನಾ
> ನೈಕೋ ಋಷಿರ್ಯಸ್ಯ ವಚಃ ಪ್ರಮಾಣಮ್ ।
> ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಮ್
> ಮಹಾಜನೋ ಯೇನ ಗತಃ ಸ ಪಂಥಾಃ ॥ (ವನ: ೩೧೨. ೧೧೫)

'ತರ್ಕವು ಚಂಚಲವು, ಶ್ರುತಿಗಳು ಭಿನ್ನಭಿನ್ನ, ಇವನ ವಚನವೇ ಅಂತಿಮ ಪ್ರಮಾಣವೆಂದು ಯಾವ ಒಬ್ಬ ಋಷಿಯ ಹೆಸರನ್ನೂ ಹೇಳಲು ಬರುವಂತಿಲ್ಲ. ಈ ರೀತಿ ಧರ್ಮದ ತತ್ವವು ಗೂಢ ವಿರುವದು; ಆದುದರಿಂದ ಮಹಾಜನರು ನಡೆದಂತೆ ನಡೆದು

ಕೊಳ್ಳುವದೊಂದೇ ಮಾರ್ಗವು'. ಒಳ್ಳೇದು. ಇದಾದರೂ ಸರಲ ಮಾರ್ಗವೇ? ಅಲ್ಲ. ಯಾಕಂದರೆ ಮಹಾಜನರು ಯಾರು, ಎಂಬ ಪ್ರಶ್ನೆಯು ಮತ್ತೆ ಹಾಗೆಯೆ ಉಳಿಯುವದು. ಇದರಂತೆ 'ಅತಿಸರ್ವತ್ರ ವರ್ಜಯೇತ್'—ಯಾವದಾದರೂ ಅತಿಶಯ ಮಾಡಬಾರದು, ಮುಂತಾದ ಸೂತ್ರವಾಕ್ಯಗಳಿಂದಲೂ ಕಾರ್ಯ ವಾಗುವದಿಲ್ಲ. ಅತಿ ಎಂದರೇನು, ಅದರ ಪ್ರಮಾಣವು ಎಷ್ಟು, ಎಂಬ ಪ್ರಶ್ನೆಗೆ ಮತ್ತೆ ಉತ್ತರವಿಲ್ಲ! ಸಾಮಾನ್ಯ ಪ್ರಸಂಗಗಳಲ್ಲಿ ಮೇಲೆ ಹೇಳಿದ ಮಾರ್ಗಗಳು ಉಪಯುಕ್ತವಾಗಬಹುದು. ಆದರೆ ಇಕ್ಕಟ್ಟಿನ ಸಮಯದಲ್ಲಿ ನಮಗೆ ಅವು ಸಹಾಯ ಮಾಡುವದು ಕಠಿಣ. ಹೀಗಿದ್ದರೂ ಸಂಕಟದಲ್ಲಿ ಕರ್ಮಾ ಕರ್ಮದ ಸಂಶಯವುಂಟಾದಾಗ ಅಹಿಂಸೆ, ಸತ್ಯ ಮುಂತಾದ ವಿಶ್ವಮಾನ್ಯ ವಚನಗಳ ಅಥವಾ ಕರ್ತವ್ಯಾಕರ್ತವ್ಯವಿವೇಕದ ತ್ಯಾಗವನ್ನು ಮಾಡಿದರೆ ಆತ್ಮೋನ್ನತಿಯು ನಿಂತುಹೋಗು ವದು, ಸಂಸಾರದ ವ್ಯವಹಾರವು ತಡೆಯುವದು, ಎಲ್ಲೆಲ್ಲಿಯೂ ಅವ್ಯವಸ್ಥೆಯಾಗುವದು. ಈ ಪ್ರಕಾರ ಕರ್ಮ-ಧರ್ಮ ಸಂಕಟಗಳೊಳಗಿನಿಂದ ಪಾರಾಗುವ ಹಾದಿಯೆ ಇಲ್ಲದಿದ್ದರೆ ಮನುಷ್ಯನು ಕೊನೆಗೆ ದಣಿದು, ಬೇಸತ್ತು, ವಿವೇಕದ ಮರ್ಯಾದೆಯನ್ನುಲ್ಲಂಘಿಸಲು ಸಿದ್ಧನಾಗಬಹುದು, ಅಥವಾ ಕರ್ಮತ್ಯಾಗ ಮಾಡಿ ಸ್ವಸ್ಥ ಮನೆಯಲ್ಲಿ ಕೂಡಲು ಇಲ್ಲವೆ ಅರ್ಜುನನಂತೆ ಸನ್ಯಾಸವನ್ನಾಶ್ರಯಿಸಲು ಉದ್ಯುಕ್ತನಾಗ ಬಹುದು. ಆದರೆ ಕರ್ಮತ್ಯಾಗದ ಈ ಪ್ರಯತ್ನವು ವ್ಯರ್ಥವು, ಯಾಕಂದರೆ ಈ ಬ್ರಹ್ಮಾಂಡದಲ್ಲಿ ಎಲ್ಲಿಯೂ ಈ ಜೀವನದಲ್ಲಿ

ಯಾವ ಕ್ಷಣಕ್ಕೂ ಕರ್ಮವೆಂಬುದನ್ನು ತಪ್ಪಿಸುವದು ಕೇವಲ ಅಶಕ್ಯವು. ಕರ್ಮವನ್ನು ಪೂರ್ಣ ಬಿಟ್ಟುಬಿಡುವದು ಎಂದೂ ಕೈಗೂಡದು, ಯಾಕಂದರೆ ಆಗ ಆ ಪ್ರಯತ್ನವೆ ಒಂದು ಕರ್ಮವಾಗುವದು! ಕರ್ಮವೆಂಬುದು ಇಷ್ಟು ಸರ್ವವ್ಯಾಪಿ ಇರುವದು. ಆದುದರಿಂದ ಕರ್ಮತ್ಯಾಗ ಮಾಡಿ ಧರ್ಮಸಂಕಟದಿಂದ ಮುಕ್ತರಾಗಬೇಕೆಂದು ಹವಣಿಸುವದು ಮೃಗಜಲದಿಂದ ನೀರಡಿಕೆಯನ್ನು ಆರಿಸಲು ಯತ್ನಿಸಿದಂತೆ ವ್ಯರ್ಥವು. ಕೊನೆಗೆ, ಕರ್ಮಾಚರಣವೆಂಬ ಕಠಿಣ ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾಗಬೇಕಾದರೆ, ಕರ್ಮಮಯ ಜೀವನಯಾತ್ರೆಯಲ್ಲಿ ಯಶಸ್ವಿಗಳಾಗಬೇಕಾದರೆ, ಕರ್ಮದ ತತ್ತ್ವಜ್ಞಾನವೆ ನಮಗೆ ಸಹಾಯ ಮಾಡಬಲ್ಲದು ಹೊರತು ಅನ್ಯರ ವರ್ತನೆ ಅಥವಾ ವಿಧಿನಿಷೇಧರೂಪ ಆಜ್ಞೆಗಳು ವಿಶೇಷ ಉಪಯುಕ್ತವಾಗವು. ಆ ತತ್ತ್ವಜ್ಞಾನವನ್ನು ಪಡೆಯಲುಜ್ಜುಗಿಸುವಾಗ ಕಾರ್ಯಾಕಾರ್ಯವ್ಯವಸ್ಥಿತಿಯು (೧೬. ೨೪.) ಜ್ಞಾನವನ್ನು ದಯಪಾಲಿಸುವ ಯೋಗರೂಪ (ಕರ್ಮಯೋಗ) ಪರಶಮಣಿಯು ಹಸ್ತಗತವಾಗುವದು. ಆ ಯೋಗವು ಎಂತಹದು ಎಂಬುದನ್ನು ಮುಂದಿನ ಪ್ರಕರಣದಲ್ಲಿ ನೋಡುವ.

## ೩ ಕರ್ಮಯೋಗವು

### ೧೪ ಕರ್ಮಯೋಗವು

'ಕರ್ಮಯೋಗ'ವು ಗೀತೆಯ ಪ್ರತಿಪಾದ್ಯ ವಿಷಯವು ಗೀತೆಯ ಜೀವಾಳವು; ಆ ಪದವು ಒಂದು ಸಂಸ್ಕೃತ ಸಮಾಸವು. ಕರ್ಮಣಃ ಯೋಗಃ, ಎಂದು ಅದರ ವಿಗ್ರಹವಾಗುವದು ಹಾಗೂ ಕರ್ಮ ಮಾಡುವ ಯೋಗ ಅಥವಾ ಯುಕ್ತಿ, ಎಂಬುದು ಅದರ ಅರ್ಥವಿರುವದು. ಕರ್ಮ ಮತ್ತು ಯೋಗ ಈ ಶಬ್ದಗಳು ಕಣ್ಣಿಗೆ ಕಿರಿಯುವಾದರೂ ಅವು ಹಿರಿದಾದ ಮಾರ್ಮಿಕ ಅರ್ಥವುಳ್ಳವುಗಳಿರುವವು. ಆ ಅರ್ಥವನ್ನು ಸತತ ಧ್ಯಾನದಲ್ಲಿಡುವುದರಿಂದಲೆ ಗೀತಾಶಾಸ್ತ್ರದ ತಾತ್ಪರ್ಯವು ಸುಗಮವಾಗುವುದು.

### ೧೫ ಕರ್ಮದ ವಿಸ್ತೃತ ಸ್ವರೂಪವು

ಧಾರ್ಮಿಕ ಸಾಹಿತ್ಯದಲ್ಲಿ ಕರ್ಮಶಬ್ದವು ಪ್ರಾಯಃ ಪಾರಲೌಕಿಕ ಸುಖದ ಸಾಧನವು, ಎಂಬರ್ಥದಿಂದ ಉಪಯೋಗಿಸಲ್ಪಟ್ಟಿರುವದು. ಆದರೆ ಆ ಸಂಕುಚಿತ ಅರ್ಥವು ಗೀತೆಯಲ್ಲಿಲ್ಲ. ಪ್ರಾಚೀನಕಾಲದಲ್ಲಿ ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು, ಅವುಗಳಿಗೆ ಕರ್ಮವೆಂಬ ಹೆಸರು ಇತ್ತು. ಈಗಲೂ ವೇದಕಾಲದ ಯಜ್ಞಯಾಗಗಳಿಗೆ ಶ್ರೌತಕರ್ಮ-ಶ್ರುತಿಗಳಲ್ಲಿ ಹೇಳಿದ ಕರ್ಮ - ಎಂಬ ಸಂಜ್ಞೆ ಇರುವದು. ಪಂಚಮಹಾಯಜ್ಞಾದಿ ಬೇರೆ ಕೆಲವು ಕರ್ಮಗಳು ಸ್ಮೃತಿ

ಗ್ರಂಥಗಳಲ್ಲಿ ಉಕ್ತವಾಗಿರುವುದರಿಂದ ಅವು ಸ್ಮಾರ್ತಕರ್ಮಗಳೆಂದೆನಿಸುವವು. ವ್ರತ ಉಪವಾಸಾದಿಗಳು ಪುರಾಣೋಕ್ತವಿರುವುದರಿಂದ ಅವು ಪೌರಾಣಿಕ ಕರ್ಮಗಳೆಂದು ಹೇಳಲ್ಪಡುತ್ತಿವೆ. ಇದಲ್ಲದೆ ಕರ್ಮಗಳನ್ನು ನಿತ್ಯ, ನೈಮಿತ್ತಿಕ, ಕಾಮ್ಯ ಮತ್ತು ನಿಷಿದ್ಧ ಎಂದು ವರ್ಗೀಕರಿಸುವುದುಂಟು. ನಿತ್ಯ ಮಾಡತಕ್ಕ ಸ್ನಾನಸಂಧ್ಯಾದಿಗಳು ನಿತ್ಯಕರ್ಮಗಳು; ಇವನ್ನು ಮಾಡಿದರೆ ವಿಶಿಷ್ಟ ಫಲವಿಲ್ಲ, ಮಾಡದಿದ್ದರೆ ಮಾತ್ರ ದೋಷವು ತಟ್ಟುವದು. ಪ್ರಸಂಗವಶಾತ್ ಮಾಡತಕ್ಕ ಪ್ರಾಯಶ್ಚಿತ್ತ ಶ್ರಾದ್ಧಾದಿಗಳು ನೈಮಿತ್ತಿಕ ಕರ್ಮಗಳು. ಕಾಮನೆಗಳ ತೃಪ್ತಿಗಾಗಿ ಮಾಡತಕ್ಕ ಧರ್ಮಗ್ರಂಥೋಕ್ತ ಕರ್ಮಗಳು ಕಾಮ್ಯವೆನಿಸುವವು. ತ್ಯಜಿಸತಕ್ಕ ಕರ್ಮವು ನಿಷಿದ್ಧವೆನಿಸುವದು. ಇಂತಹದನ್ನು ಮಾಡತಕ್ಕದ್ದು, ಇಂತಹದನ್ನು ಬಿಡತಕ್ಕದ್ದು, ಎಂದು ವಿಧಿನಿಷೇಧಾತ್ಮಕವಾಗಿ ರಾಜಶಾಸನಗಳಂತೆ ಈ ಕರ್ಮಗಳು ಹೇಳಲ್ಪಟ್ಟಿರುವವು. ಆದರೆ ಹೀಗೆ ಮಾಡು, ಹೀಗೆ ಮಾಡಬೇಡ, ಎಂದು ವಿಶಿಷ್ಟ ಕರ್ಮಗಳನ್ನು ಕುರಿತು ಆಜ್ಞೆ ಮಾಡುವದು ಗೀತೆಯ ಉದ್ದೇಶವಿಲ್ಲ. ಮಾಡತಕ್ಕ ಸಕಲ ಕರ್ಮಗಳನ್ನು ಯಾವ ವೃತ್ತಿಯಿಂದ ಮಾಡಿದರೆ ಮನುಷ್ಯನು ಆತ್ಮಹಿತವನ್ನು ಸಾಧಿಸಬಲ್ಲನೊ ಆ ವೃತ್ತಿಯನ್ನುಪದೇಶಿಸುವುದೇ ಗೀತೆಯ ಹೇತುವು. ಮೇಲೆ ಹೇಳಿದ ಕರ್ಮಗಳಲ್ಲದೆ ಬೇರೆ ಅನೇಕ ತರದ ಕರ್ಮಗಳನ್ನು ಮನುಷ್ಯನು ಹಗಲಿರುಳು ಮಾಡುವನು ಮತ್ತು ಅವುಗಳ ಪರಿಣಾಮವು ಅವನ ಜೀವನದ ಮೇಲೆ ಆಗುವದು. ಧರ್ಮ

ಗ್ರಂಥಗಳಲ್ಲಿ ಉಕ್ತವಾದ ಕರ್ಮಗಳಿಗಿಂತ ಇತರ ಕರ್ಮಗಳ ವಿಸ್ತಾರವೇ ಬಹಳ ದೊಡ್ಡದಿರುವದು. ಅವುಗಳಲ್ಲಿ ಎಷ್ಟೋ ಅನಿವಾರ್ಯವಿರುವುದರಿಂದ ಅವು ಸಹಜವಾಗಿ ಮನುಷ್ಯ ನಿಂದ ನಿತ್ಯ ಮಾಡಲ್ಪಡುವವು. ಉದಾ: ನೋಡುವ, ಕೇಳುವ, ಮುಟ್ಟುವ, ಮೂಸುವ, ತಿನ್ನುವ, ಹೋಗುವ, ಮಲಗುವ, ಉಸುರಾಡಿಸುವ, ಮಾತಾಡುವ, ವಿಸರ್ಜನೆ ಮಾಡುವ, ಕೊಳ್ಳುವ, ಕಣ್ಣು ಮುಚ್ಚುವ ತೆರೆಯುವ ಕರ್ಮಗಳನ್ನು (೫. ೮–೯) ಮನುಷ್ಯನು ನಿತ್ಯ ಮಾಡುತ್ತಿರುವನು. ಬದುಕುವದು ಸಾಯುವದು, ಇವಾದರೂ ಕರ್ಮಗಳೇ. ತಾತ್ಪರ್ಯವೇನಂದರೆ, ನಮ್ಮ ಜೀವನದ ಪ್ರತಿಕ್ಷಣವೂ ಆ ಕ್ಷಣದಲ್ಲಿ ಆಗುತ್ತಿರುವ ನಮ್ಮ ಪ್ರತಿಯೊಂದು ಚಲನವಲನವೂ ಕರ್ಮವೆನಿಸುವದು. ಈ ಬಗೆಯ ಜೀವನವ್ಯಾಪಿ ಕರ್ಮವನ್ನು ಯಾವ ಮನೋವೃತ್ತಿಯಿಂದ ಮಾಡಬೇಕು ಎಂಬುದನ್ನು ಕುರಿತು ಗೀತೆಯು ತನ್ನ ದಿವ್ಯ ಉಪದೇಶವನ್ನುಸುರುವದು. 'ಮಾಡು' ಎಂಬ ಕ್ರಿಯಾಪದದ ಅನಂತರೂಪಗಳೆ ಸೃಷ್ಟಿಯಾಗಿ ಮತ್ತು ತದಂತರ್ಗತವಾದ ನಮ್ಮ ಜೀವನವಾಗಿ ನಟಿಸಿರುವವು. ಬಂಧಕವೆಂದೆನಿಸುವ ಆ ಅನಂತ ಕ್ರಿಯಾಜಾಲವನ್ನು ಗೀತೆಯ ಉಪದೇಶವು ತನ್ನ ಪ್ರೇಮಾಲಿಂಗನದಿಂದ ಪರಮ ಸುಖದಾಯಕವನ್ನಾಗಿ ಮಾಡಿಬಿಡುವದು. ಕರ್ಮವು ಗ್ರಂಥೋಕ್ತವಿರಲಿ ಬಿಡಲಿ, ಮಾನ್ಯವಿರಲಿ ನಿಂದ್ಯವಿರಲಿ, ಶಾರೀರಿಕವಿರಲಿ ಮಾನಸಿಕವಿರಲಿ, ಏನೇ ಇದ್ದರೂ ಎಂತಹದಿದ್ದರೂ ಅದು ಕರ್ಮವೇ ಇರುವದು ಮತ್ತು ಅದರ ಒಳಿತು

ಕೆಡಕು ಪರಿಣಾಮವು ಮನುಷ್ಯನ ಅಂತಃಕರಣದ ಮೇಲೆ ಆಗೇ ತೀರುವದು, ಎಂಬುದನ್ನು ಲಕ್ಷಿಸಿ ಗೀತೆಯು ಸಮಗ್ರ ಕರ್ಮದ ವಿಚಾರ ಮಾಡುವದು; ಮತ್ತು ಯಜ್ಞದಾನ ತಪ ಇತ್ಯಾದಿ ಗ್ರಂಥೋಕ್ತ ಕರ್ಮಗಳನ್ನಷ್ಟೇ ಅಲ್ಲ, ಆದರೆ ಕಲ್ಪಿಸ ಬಹುದಾದ ಅಥವಾ ಆಚರಿಸಬಹುದಾದ ಕರ್ಮಮಾತ್ರವನ್ನು ಮೋಕ್ಷದಾಯಕವಾಗುವಂತೆ ಮಾಡುವ ದಿವ್ಯ ಯುಕ್ತಿ-ಯನ್ನು ಗೀತೆಯು ಕಲಿಸುವದು. ಜೀವನದಲ್ಲಿಯ ಎಲ್ಲ ಸಣ್ಣ ದೊಡ್ಡ ಕರ್ಮಗಳನ್ನು ಈ ಯುಕ್ತಿಯಿಂದ ಮಾಡಿದರೆ ಆತ್ಮ ಸುಖವು ಕೈಸೇರುವದು. ಈ ಯುಕ್ತಿಯನ್ನು ಬಿಟ್ಟು ಮಾಡಿ-ದರೆ ಆ ಸುಖವು ಕೈವಿೀರುವದು.

### ೧೬ ಯೋಗವೆಂದರೆ ಕರ್ಮ ಮಾಡುವ ಉತ್ತಮ ಯುಕ್ತಿ

ಚಿತ್ತವೃತ್ತಿಗಳ ನಿರೋಧವು ಅಥವಾ ಸಮಾಧಿಯು ಮತ್ತು ತತ್ಸಾಧನವು, ಅರ್ಥಾತ್ ಪಾತಂಜಲಯೋಗ ಸೂತ್ರ-ಗಳಲ್ಲಿ ಹೇಳಿದ ಅಷ್ಟಾಂಗ ಯೋಗವು, ಎಂಬ ಅರ್ಥದಿಂದ 'ಯೋಗ' ಶಬ್ದವು ಎಷ್ಟೋ ಸಾರೆ ಉಪಯೋಗಿಸಲ್ಪಡುತ್ತಿದೆ. ಗೀತೆಯಲ್ಲಿ ನಾಲ್ಕಾರು ಸಂದರ್ಭಗಳಲ್ಲಿ ಮಾತ್ರ ಈ ಅರ್ಥವು ಆಗುವದು, ಉಳಿದೆಡೆಗೆ ಯೋಗಶಬ್ದವು 'ಸಾಧನ, ಉಪಾಯ, ಯುಕ್ತಿ, ಕುಶಲತೆ' ಎಂಬರ್ಥದಿಂದಲೆ ಯೋಜಿಸಲ್ಪಟ್ಟಿರುವದು. ಬರಿಯ ಕುಶಲತೆ ಅಥವಾ ಯುಕ್ತಿ, ಎಂದು ಹೇಳಿದಾಕ್ಷಣಕ್ಕೆ ಈ ವಿಷಯವು ಸ್ಪಷ್ಟವಾಗುವದಿಲ್ಲ. ಯಾವ ಬಗೆಯ ಕುಶಲತೆ ಮತ್ತು ಯಾತರಲ್ಲಿ, ಇದನ್ನು ಒಡೆದು ಹೇಳುವದು ಅವಶ್ಯವು. ಕುಶಲತೆ ಎಂದೊಡನೆ ಕರ್ಮ ಮಾಡುವುದರಲ್ಲಿ, ಚಿತ್ತವೃತ್ತಿ

ಸಿರೋಧಪಲ್ಲಿ, ಕರ್ಮಸನ್ಯಾಸದಲ್ಲಿ ಕುಶಲತೆ, ಎಂಬ ಅರ್ಥವೂ ಆಗಬಹುದು. ಯಾವ ವಿಶಿಷ್ಟ ಸಾಮರ್ಥ್ಯದ ಮೂಲಕ ಪರಮಾತ್ಮನು ಈ ಸೃಷ್ಟಿಯನ್ನು ನಿರ್ಮಿಸಿದನೊ ಅದಕ್ಕೂ ಯೋಗವೆಂಬ ಹೆಸರು ಇರುವದು. ಆದುದರಿಂದಲೆ ಶ್ರೀಕೃಷ್ಣನಿಗೆ ಯೋಗೇಶ್ವರನೆಂಬ ಬಿರುದು ಇರುವದು. ಆದರೆ ಗೀತೆಯಲ್ಲಿ ಯೋಗದ ಈ ಅರ್ಥವು ಮುಖ್ಯವಲ್ಲ. ಈ ರೀತಿ ಯೋಗ ಶಬ್ದದ ಅರ್ಥವು ಸಂದಿಗ್ಧವಾಗಬಾರದೆಂದು ಗೀತೆಯು ಎಚ್ಚರಪಟ್ಟಿರುವದು ಮತ್ತು ಯೋಗಃ ಕರ್ಮಸು ಕೌಶಲಮ್ (೨.೫೦)ಯೋಗವೆಂದರೆ ಕರ್ಮ ಮಾಡುವಲ್ಲಿ ಕುಶಲತೆ, ಅಂದರೆ ಯಾವದೊಂದು ಕರ್ಮವನ್ನು ಮಾಡುವ ಅತ್ಯುತ್ತಮ ರೀತಿ, ಬಂಧಕವಾಗದಂತೆ ಕರ್ಮ ಮಾಡುವ ಯುಕ್ತಿ,ಎಂಬ ವ್ಯಾಖ್ಯೆಯನ್ನು ಮಾಡಿರುವದು.

### ೧೭ ಸಮತೆಯೆ ಆ ಯುಕ್ತಿ

ಕರ್ಮ ಮಾಡುವ ಕುಶಲತೆ ಅಂದರೆ ಯೋಗ, ಹೀಗೆ ಅಂದ ಮಾತ್ರಕ್ಕೆ ಯೋಗ ಶಬ್ದದ ಅರ್ಥವು ಪೂರ್ಣ ಸ್ಪಷ್ಟವಾಗುವದಿಲ್ಲ. ಆ ಕುಶಲತೆ ಎಂತಹದು ಇದೂ ಸ್ಪಷ್ಟವಾಗಲಿಕ್ಕೆ ಬೇಕು ಮತ್ತು ಅದನ್ನು ಗೀತೆಯು ಸಮತ್ವಂ ಯೋಗ ಉಚ್ಯತೇ (೨.೪೮) ಯೋಗವೆಂದರೆ ಸಮತ್ವ, ಎಂದು ಹೇಳಿ ಸ್ಪಷ್ಟ ಮಾಡಿರುವದು. ಕರ್ಮದ ಸಿದ್ಧಿ ಅಥವಾ ಅಸಿದ್ಧಿ, ಸಫಲತೆ ಅಥವಾ ಅಸಫಲತೆ ಇವುಗಳ ಬಗ್ಗೆ ಸಮವೃತ್ತಿಯನ್ನಿಡುವುದೆ ಸಮತ್ವವು,ಎಂಬುದು ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ (೨.೪೮) ಎಂಬ ಗೀತಾವಚನದಿಂದ ತಿಳಿ-

ಯುವದು. ಈ ರೀತಿ ಫಲಾಫಲಗಳ ಬಗ್ಗೆ ಸಮವೃತ್ತಿಯನ್ನಿಟ್ಟು ಕರ್ಮ ಮಾಡುವುದೇ ಕರ್ಮ ಮಾಡುವ ಉತ್ತಮ ರೀತಿ, ಕರ್ಮಕುಶಲತೆ ಅಥವಾ ಯೋಗ, ಎಂದು ಗೀತೆಯ ಅಭಿಪ್ರಾಯವು.

### ೧೮ ಯೋಗ ಅಂದರೆ ಕರ್ಮಯೋಗವೇ

ಶ್ರೀಕೃಷ್ಣನು ಅರ್ಜುನನಿಗೆ ಕರ್ಮಾಕರ್ಮದ ವಿವೇಕವನ್ನು ಹೇಳುವಾಗ ಮೇಲಿಂದ ಮೇಲೆ ಯೋಗವನ್ನಾಶ್ರಯಿಸು, ಎಂದು ಉಪದೇಶ ಮಾಡುವನು: ಯೋಗಸ್ಥಃ ಕುರು ಕರ್ಮಾಣಿ (೨. ೪೮) 'ಯೋಗಸ್ಥನಾಗಿ ಕರ್ಮ ಮಾಡು;' ಯೋಗಮಾತಿಷ್ಠೋತ್ತಿಷ್ಠ ಭಾರತ (೪.೪೨) 'ಭಾರತನೇ, ಯೋಗವನ್ನಾಶ್ರಯಿಸು ಮತ್ತು ಏಳ್ಳೇಳು;' ತಸ್ಮಾದ್ಯೋಗೀ ಭವಾರ್ಜುನ, (೬.೪೬) 'ಆದುದರಿಂದ ಅರ್ಜುನನೇ, ನೀನು ಯೋಗಿಯಾಗು;' ಈ ವಚನಗಳೆಲ್ಲ ಕರ್ಮಪ್ರೇರಕವಿರುವದರಿಂದ ಇಲ್ಲಿ ಯೋಗವೆಂದರೆ ಸಮಾಧಿಯೆಂದು ಅರ್ಥವಾಗಲರಿಯದು. ಅರ್ಜುನನಾದರೂ ಯೋಗವೆಂದರೆ ಸಾಮ್ಯಬುದ್ಧಿಯೆಂದೇ ತಿಳಿದಿರುವನೆಂಬುದು, ಯೋऽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ(೬.೩೩) 'ಮಧುಸೂದನನೆ ಸಾಮ್ಯಬುದ್ಧಿಯಿಂದ ಪ್ರಾಪ್ತವಾಗತಕ್ಕ ಯಾವ ಯೋಗವನ್ನು ನೀನು ಹೇಳಿರುವಿಯೋ,' ಅದೇ ಯೋಗ, ಎಂಬ ಆವನ ವಚನದ ಮೇಲಿಂದ ವ್ಯಕ್ತವಾಗುವದು. ಇದಕ್ಕೂ ಮುಂಚಿನ, ಸರ್ವಥಾ ವರ್ತಮಾನೋऽಪಿ ಸ ಯೋಗೀ ಮಯಿ ವರ್ತತೇ (೬. ೩೧) 'ಆ ಯೋಗಿಯು ಯಾವ ರೀತಿ ವರ್ತಿಸಿ-

ದರೂ ನನ್ನಲ್ಲಿಯೇ ವರ್ತಿಸುವನು,' ಮತ್ತು ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ (೬. ೩೨) 'ಸುಖದುಃಖಗಳು ಸಮವೆಂದು ಭಾವಿಸುವವನೆ ಪರಮ ಯೋಗಿಯು,' ಎಂಬ ಶ್ರೀಕೃಷ್ಣನ ಎರಡು ವಾಕ್ಯಗಳು ಅನುಕ್ರಮವಾಗಿ ಕರ್ಮಪರಾಯಣತೆಯನ್ನೂ ಸಮತ್ವಬುದ್ಧಿಯನ್ನೂ ವಿವರಿಸುವವು, ಎಂಬುದನ್ನು ನಾವು ಲಕ್ಷ್ಯದಲ್ಲಿಡತಕ್ಕದ್ದು. ನಾಲ್ಕನೇ ಅಧ್ಯಾಯದ ಆರಂಭದಲ್ಲಿ ತನ್ನ ಉಪದೇಶದ ಪರಂಪರೆಯನ್ನು ಹೇಳುವಾಗ ಶ್ರೀಕೃಷ್ಣನು ಅದಕ್ಕೆ ಯೋಗವೆಂದಿರುವನು ಮತ್ತು ಗೀತೆಯ ಕೊನೆಯಲ್ಲಿ ಸಂಜಯನು ಇದೇ ಉಪದೇಶಕ್ಕೆ ಪರಮಯೋಗ, ಎಂದಿರುವನು. ಈ ಪ್ರಕಾರ ಗೀತೆಯಲ್ಲಿಯ ಎಲ್ಲ ಪಾತ್ರಗಳ ಮನಸಿನಲ್ಲಿ ಯೋಗವೆಂದರೆ ಕರ್ಮಯೋಗ ಎಂಬ ಒಂದೇ ಅರ್ಥವು ಇತ್ತು ಎಂಬುದು ಸಿದ್ಧವು. ಭಗವಂತನಿಂದ ಪಡೆದ ಈ ಯೋಗ ಧರ್ಮದ ಪ್ರಚಾರವನ್ನು ಮಾಡುವ ಮತ್ತು ಅದರ ಪರಂಪರೆಯನ್ನು ನಡೆಸುವ ವಿವಸ್ವಾನ್, ಮನು, ಮತ್ತು ಇಕ್ಷ್ವಾಕು ಇವರಾದರೂ ಸನ್ಯಾಸಿಗಳಿದ್ದಿಲ್ಲ, ಅವರು ಕರ್ಮ ಮಾಡುವವರೇ ಇದ್ದರು; ಆದುದರಿಂದ ಅವರು ದೊರಕಿಸಿದ ಮತ್ತು ಆಶ್ರಯಿಸಿದ ಯೋಗವೂ ಕರ್ಮಯೋಗವೇ ಇತ್ತು, ಎಂಬುದು ನಿಃಸಂದೇಹವು.

### ೧೯ 'ಕರ್ಮಯೋಗ' ಎಂಬ ಅರ್ಥವೇ ಸರಿಯು

ಪ್ರಾಚೀನ ಕಾಲದಿಂದ ನಮ್ಮ ದೇಶದಲ್ಲಿ ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಎರಡು ಆತ್ಮಜ್ಞಾನ ಪಡೆಯುವ

ಸ್ವತಂತ್ರ ಮಾರ್ಗಗಳು ನಡೆಯುತ್ತ ಬಂದಿರುವವು. ವೈರಾಗ್ಯ ಮತ್ತು ಆತ್ಮಜ್ಞಾನ ಇವು ಉಂಟಾದೊಡನೆ ಸ್ವರೂಪತಃ ಕರ್ಮತ್ಯಾಗ ಮಾಡುವದೆ ನಿವೃತ್ತಿ ಮಾರ್ಗದ ಮುಖ್ಯ ಲಕ್ಷಣವು. ಕಾಮನೆಗಳನ್ನು ಕ್ಷಯಿಸುತ್ತಿರುವಾಗಲೂ ಮತ್ತು ಆತ್ಮಜ್ಞಾನ ಉಂಟಾದ ಬಳಿಕೂ ಸ್ವರೂಪತಃ ಕರ್ಮತ್ಯಾಗ ಮಾಡದೆ ಸಮತ್ವಬುದ್ಧಿಯಿಂದ ಸ್ವಕರ್ಮವನ್ನು ಆಜೀವನ ಮಾಡುತ್ತ ಇರುವದೆ ಪ್ರವೃತ್ತಿ ಮಾರ್ಗದ ಮುಖ್ಯ ಲಕ್ಷ-ಣವು. ಜ್ಞಾನಯೋಗೇನ ಸಾಂಖ್ಯಾನಾಮ್ ಮತ್ತು ಕರ್ಮಯೋಗೇನ ಯೋಗಿನಾಮ್ (೩ ೩) 'ಜ್ಞಾನಯೋಗದಿಂದ ಸಾಂಖ್ಯರ ಮತ್ತು ಕರ್ಮಯೋಗದಿಂದ ಯೋಗಿಗಳ,' ಎಂಬ ಗೀತಾವಚನದಲ್ಲಿ ಈ ಎರಡೂ ಮಾರ್ಗಗಳ ಉಲ್ಲೇಖವಿರು-ವದು. ಮಹಾಭಾರತದಲ್ಲಿಯೂ ಪ್ರವೃತ್ತಿಲಕ್ಷಣೋ ಯೋಗಃ ಜ್ಞಾನಂ ಸನ್ಯಾಸಲಕ್ಷಣಮ್ (ಅಶ್ವಮೇಧ ಪರ್ವ: ೪೩.೨೫) 'ಯೋಗದೆಂದರೆ ಪ್ರವೃತ್ತಿ ಲಕ್ಷಣವುಳ್ಳದ್ದು ಜ್ಞಾನ-ವೆಂದರೆ ನಿವೃತ್ತಿಲಕ್ಷಣವುಳ್ಳದ್ದು' ಎಂದು ಈ ಎರಡು ಮಾರ್ಗಗಳ ಲಕ್ಷಣಗಳು ಹೇಳಲ್ಪಟ್ಟಿವೆ. ಅದೇ ಮಹಾಭಾರತದ ನಾರಾಯಣೀಯ ಉಪಾಖ್ಯಾನದಲ್ಲಿ ಆ ಧರ್ಮ-ದವರು, ಸುಪ್ರಯುಕ್ತೇನ ಕರ್ಮಣಾ (ಶಾಂತಿಪರ್ವ: ೩೪೭. ೫೬) 'ಸುಂದರವಾದ ಯುಕ್ತಿಪೂರ್ವಕ ಕರ್ಮದಿಂದ,, ಪರಮೇಶ್ವರನನ್ನು ಪಡೆಯುವರು, ಎಂಬ ವರ್ಣನವಿರುವದು. ಗೀತೆ ಮತ್ತು ನಾರಾಯಣೀಯ ಧರ್ಮ ಇವುಗಳ ಉಪ-ದೇಶವು ಒಂದೇ ಇರುವದರಿಂದ ಗೀತೆಯಲ್ಲಿಯು ಯೋಗ

ಶಬ್ದದ ಅರ್ಥವನ್ನು ಕರ್ಮಯೋಗವೆಂದೇ ಮಾಡುವದು ಅವಶ್ಯವು ಮತ್ತು ಯುಕ್ತಿಯುಕ್ತವು.

### ೨೦ ಜನಕನ ಉದಾಹರಣೆ

ಬೌದ್ಧಧರ್ಮದ ಮಹಾಯಾನಪಂಥದ ಪುರಸ್ಕರ್ತನೂ ಮಹಾಕವಿಯೂ ಆದ ಅಶ್ವಘೋಷನು ತನ್ನ 'ಬುದ್ಧಚರಿತ' ಗ್ರಂಥದಲ್ಲಿ ಗೃಹಸ್ಥಾಶ್ರಮದಲ್ಲಿಯೆ ಇದ್ದು ಮೋಕ್ಷವನ್ನು ಹೇಗೆ ಸಂಪಾದಿಸಬೇಕು, ಎಂಬುದನ್ನು ತಿಳಿಸುವ ಸಂದರ್ಭದಲ್ಲಿ ಜನಕರಾಜನ ಉದಾಹರಣೆಯನ್ನು ಕೊಟ್ಟಿರುವನು ಮತ್ತು ಜನಕನು ಯೋಗವಿಧಿಯ ಆಚಾರ್ಯಪದವಿಯನ್ನು ಪಡೆದನೆಂದು ಹೇಳಿರುವನು. ಗೀತೆಯಲ್ಲಿಯೂ ಕರ್ಮಯೋಗದ ವಿಚಾರವು ನಡೆದಾಗ ಶ್ರೀಕೃಷ್ಣನು ಜನಕನ ಹೆಸರನ್ನು ಹೇಳಿರುವನು. ಗೀತೆಯು ನುಡಿದ ಯೋಗವು ಜನಕನು ಆಚರಿಸಿದ ಕರ್ಮಯೋಗವೇ ಇರುವದೆಂಬುದು ಇದರ ಮೇಲಿಂದ ನಿಚ್ಚಳವಾಗಿ ತೋರಿ ಬರುವದು.

### ೨೧ ಸಂಕಲ್ಪದಲ್ಲಿ ಯೋಗದ ನಿರ್ದೇಶವು

ಎಲ್ಲ ಗೀತಾಧ್ಯಾಯಗಳ ಕೊನೆಗೆ ಸಂಕಲ್ಪದಲ್ಲಿರುವ ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ, ಎಂಬ ಶಬ್ದಗಳು ಗೀತೆಯ ವಿಷಯವನ್ನು ನಿರ್ದೇಶಿಸುತ್ತವೆ. ಅವಾದರೂ ಗೀತಾರ್ಥವನ್ನು ಸ್ವಲ್ಪದರಲ್ಲಿ ಸ್ಪಷ್ಟವಾಗಿ ಹೇಳುವವು. ಬ್ರಹ್ಮಜ್ಞಾನವೆ ಗೀತೆಯ ತತ್ತ್ವಜ್ಞಾನವು ಮತ್ತು ಯೋಗವೆ ಅರ್ಥಾತ್ ಕರ್ಮಯೋಗವೆ ಅದರ ಸಾಧನವು, ಎಂಬುದು ಆ ಸಂಕಲ್ಪದ ಭಾವಾರ್ಥವು. ಇಲ್ಲಿ ಉಪಯೋಗಿಸಿದ ಯೋಗ

ಶಬ್ದವು ಕರ್ಮಸಂಬಂಧದಿಂದಲೆ ಇರುವದು, ಯಾಕಂದರೆ ಇದರ ನಿಃಸಂದಿಗ್ಧವಾದ ವಿವರವು ಗೀತೆಯಲ್ಲಿಯೆ ಬಂದಿರುವದು; ಮತ್ತು ಯೋಗದ ಅನುಪಮತೆಯು ಹಾಗೂ ನವೀನತೆಯು ಕಡೆಗೆ ದೃಷ್ಟಿಯನ್ನು ಎಳೆಯುವ ಉದ್ದೇಶದಿಂದ ಸಂಕಲ್ಪದಲ್ಲಿ ಕೇವಲ ಯೋಗವೆಂಬ ಸಣ್ಣ ಶಬ್ದವನ್ನೆ ಉಪಯೋಗಿಸಿರುವರೆಂಬುದು ಸ್ಪಷ್ಟವು.

### ೨೨ ಕರ್ಮಯೋಗದ ಮಹತ್ವವು

ಈ ರೀತಿ ಕರ್ಮಯೋಗವೆಂಬ ಸಣ್ಣ ಸಮಾಸಪದದಲ್ಲಿ ಆತ್ಮತೃಪ್ತಿಯ ಸರಲ ಸಾಧನವನ್ನು ಕೈವಶ ಮಾಡಿಕೊಡುವ ಮಹಾಸಾಮರ್ಥ್ಯವು ಉಂಟು. ಹುಟ್ಟು ಸಾವುಗಳೆಂಬ ಎರಡು ಮೇರೆಗಳ ನಡುವಿನ ಕರ್ಮಮಾತ್ರವು, ಮರಣವು ಸಹ, ಗೀತೆಯಲ್ಲಿ ಕರ್ಮವೆಂದು ಸಂಬೋಧಿಸಲ್ಪಟ್ಟಿರುವದು. ಈ ಕರ್ಮಮಾತ್ರವನ್ನು ಸಮಬುದ್ಧಿಯಿಂದ ಮಾಡುವ ಸುಂದರ ಯುಕ್ತಿಯೆ ಯೋಗವೆನಿಸುವದು. ಇಂತಹದೊಂದು ಕರ್ಮ ಮಾಡಬೇಕು ಇಂತಹದೊಂದು ಬಿಡಬೇಕು, ಎಂದು ವಿಶಿಷ್ಟ ಕರ್ಮಗಳ ನಾಮನಿರ್ದೇಶಮಾಡಿ ವಿಧಿನಿಷೇಧಾತ್ಮಕವಾದ ಆಜ್ಞೆಗಳನ್ನು ಕೊಡುವದು ಕರ್ಮಯೋಗದ ವಿಷಯವಲ್ಲ. ಆದರೆ ಪ್ರತ್ಯೇಕ ಕರ್ಮದ ಸಾರಾಸಾರತೆ, ಯೋಗ್ಯಾಯೋಗ್ಯತೆ ಇವುಗಳನ್ನು ನಿರ್ಣಯಿಸುವ ಒರೆಗಲ್ಲನ್ನು ಗೊತ್ತುಪಡಿಸಿ ಅದರಂತೆ ಅನಾಸಕ್ತಿಯಿಂದ ವರ್ತಿಸುವ ಸುಂದರ ಯುಕ್ತಿಯನ್ನು ಉಪದೇಶಿಸುವುದೆ ಕರ್ಮಯೋಗದ ವಿಷಯವು. ಈ ಅಪೂರ್ವ ವಿಷಯದ ತಾತ್ವಿಕ ಉಪಪತ್ತಿಯು

ಗೀತೆಯಲ್ಲಿ ಸರಲವಾಗಿ ಮತ್ತು ಮನದಟ್ಟಾಗುವಂತೆ ಹೇಳಲ್ಪಟ್ಟಿದ್ದರಿಂದ ಗೀತೆಯು ಕರ್ಮಯೋಗಶಾಸ್ತ್ರದ ಅನುಪಮ ಗ್ರಂಥವೆಂದು ತಿಳಿಯಲ್ಪಟ್ಟಿದೆ. ಇನ್ನು ಆತ್ಮಸುಖ ಮತ್ತು ಸಮಾಜಧಾರಣೆ ಎಂಬ ಯಾವ ಇಬ್ಬಗೆಯ ಧ್ಯೇಯಸಾಧನೆಗಾಗಿ ಕರ್ಮಯೋಗವು ಆಚರಿಸಲ್ಪಡುವದೊ ಆ ಧ್ಯೇಯಗಳ ಲಕ್ಷಣಗಳೇನು ಎಂಬ ಮುಂತಾದ ವಿಷಯಗಳನ್ನು ವಿಚಾರಿಸುವದು ಅವಶ್ಯವಿರುವದು.

## ೪ ಭೌತಿಕ ದೃಷ್ಟಿ

### ೨೩ ಭೌತಿಕ ಮತ್ತು ಆಧ್ಯಾತ್ಮಿಕ ದೃಷ್ಟಿ

ಕಾರ್ಯಾಕಾರ್ಯ, ನೀತಿ, ಧರ್ಮ ಇವುಗಳನ್ನು ಅಧ್ಯಾತ್ಮದೃಷ್ಟಿಯಿಂದ ನಿರ್ಣಯಿಸುವುದೆ ಸನ್ಮಾನಿತವಾದ ಮತ್ತು ಸರ್ವೋತ್ತಮವಾದ ರೀತಿಯು, ಎಂದು ಗೀತೆಯ ಮತವಿರುವದು; ಆದರೆ ಆ ದೃಷ್ಟಿಯ ವಿಚಾರ ಮಾಡುವ ಪೂರ್ವದಲ್ಲಿ ಈ ವಿಷಯದಲ್ಲಿ ಉಪಯೋಗಿಸಲ್ಪಡುತ್ತಿರುವ ಭೌತಿಕ ದೃಷ್ಟಿಯನ್ನು ವಿಚಾರಿಸಿದರೆ ಅಧ್ಯಾತ್ಮದ ಮಹತ್ವವೂ ಅನುಪಮತೆಯೂ ಹೆಚ್ಚು ಒಡೆದು ತೋರುವವು. ಅಖಿಲ ವಿಶ್ವವ್ಯಾಪಿಯಾದ ಏಕ, ಅವ್ಯಕ್ತ, ಅಧ್ಯಾತ್ಮತತ್ವವನ್ನು ಲೆಕ್ಕಿಸದೆ ಜಗತ್ತಿನಲ್ಲಿ ಕಣ್ಣಿಗೆ ತೋರುವ ಅನೇಕತ್ವದ ಆಧಾರದಿಂದ ಯಾವದೊಂದು ಸಿದ್ಧಾಂತವನ್ನು ಮಾಡುವ ಪ್ರಯತ್ನವೆ ಭೌತಿಕ ದೃಷ್ಟಿ ಎನಿಸುವದು. ಈ ದೃಷ್ಟಿಯಿಂದ ವಿಚಾರ ಮಾಡಿ ನಿರ್ಣಯಿಸಿದ ಮತಗಳಲ್ಲಿಯೂ ವಿವಿಧತೆ ಕಂಡು ಬರುವದು. ಹಲವುಗಳಲ್ಲಿ ನೀತಿಹೀನತೆ ಕಂಡರೆ ಮತ್ತೆ ಕೆಲವುಗಳಲ್ಲಿ ಉದಾತ್ತ ವಿಚಾರ ಮತ್ತು ಒಳ್ಳೇ ವರ್ತನವು ಕಾಣುವದು. ಇನ್ನೂ ಹಲವು ಮತಗಳಲ್ಲಿಯ ಸಿದ್ಧಾಂತಗಳು ಅಧ್ಯಾತ್ಮ ದೃಷ್ಟಿಯಿಂದ ಮಾಡಿದ ನಿರ್ಣಯಗಳ ಸರಿಜೋಡಿಗೆ ಬರುವವು. ಹೀಗಿದ್ದರೂ ಈ ಎರಡು ದೃಷ್ಟಿಗಳ ನಡುವಿನ ತಾರತಮ್ಯವು ನಷ್ಟವಾಗಲಾರದು. ಇನ್ನು ಭೌತಿಕದೃಷ್ಟಿಯಿಂದ ಮಾಡಿದ ಕೆಲವು ನಿರ್ಣಯಗಳನ್ನು ವಿಚಾರಿಸುವ.

## ೨೪ ಚಾರ್ವಾಕ ದೃಷ್ಟಿ

ಇಡೀ ಪ್ರಪಂಚದ ಕೇಂದ್ರವು 'ನಾನು', ಏನು ಮಾಡಿದರೂ 'ನನಗೆ' ಲಾಭವಾಗಬೇಕು, ಜಗತ್ತಿನಲ್ಲಿದ್ದುದೆಲ್ಲ 'ನನ್ನ' ಸಲುವಾಗಿ, ಎಲ್ಲೆಲ್ಲಿಯೂ 'ನನ್ನದೆ' ನಡೆಯಬೇಕು, ಎಂಬ 'ಸ್ವ' ದೃಷ್ಟಿಯಿಂದಲೆ ಎಲ್ಲವನ್ನು ನೋಡುವ, ವಿಚಾರಿಸುವ, ಪಕ್ಷವೊಂದಿರುವದು. ಆ ಪಕ್ಷದವನು ಆ ದೃಷ್ಟಿಯಿಂದಲೆ ವರ್ತಿಸುವನು; ಅವನು ತನ್ನ ವಿಚಾರವನ್ನೆ ಮಾಡುವನು. ಎರಡನೆಯವರ ಮಾತನ್ನು ಅವನು ಮನದಲ್ಲಿ ಸಹ ತಾರನು. 'ನಾನೇ ನಾನು' ಎಂಬ ಅಹಂನಾದವು ಅಹರ್ನಿಶ ಅವನ ಕಿವಿಯಲ್ಲಿ ತುಂಬಿರುವದು. ಎರಡನೆಯವರಿಗೆ ಲಾಭವಾಗುವಂಥ ದಾನಾದಿ ಕರ್ಮಗಳನ್ನು ಮಾಡಿದರೂ ಅವನು ಅದರಲ್ಲಿ ತನ್ನ ಕೀರ್ತಿ, ತನ್ನ ಪ್ರತಿಷ್ಠೆ ಆಗುವುದೋ ಇಲ್ಲವೋ ಎಂಬುದನ್ನು ನಿರೀಕ್ಷಿಸುವನು. ಅವನ ಕೆಲವು ಕರ್ಮಗಳು ಪರಹಿತಾರ್ಥವೆಂದು ಕಂಡರೂ ಅವುಗಳಿಂದ ಸಹ ಅವನು ತನ್ನ ಲಾಭವನ್ನೆ ಅರಸುತ್ತಿರುವನೆಂಬುದು ಸ್ಪಷ್ಟವು. ಅವನ ಪ್ರತಿವ್ಯವಹಾರದಲ್ಲಿ ಸ್ವಾರ್ಥತತ್ವವೆ ವ್ಯಾಪಿಸಿರುವದು. ಉಂಡು ತಿಂದು, ಉಟ್ಟು ತೊಟ್ಟು ಯಾವಜ್ಜೀವ ಸುಖದಿಂದ ಇರಬೇಕು, ಸುಖಸಾಧನಗಳನ್ನು ಬೇಕಾದ ಛಲಬಲಗಳಿಂದ ದೊರಕಿಸಬೇಕು, ಎಂಬುದೇ ಅವನ ಗುರಿಯು. ಈ ಪರಿಯ ಉಗ್ರಸ್ವಾರ್ಥಿಯು ಚಾರ್ವಾಕನೆನಿಸುವನು. ಈ ಬಗೆಯಿಂದ ವರ್ತಿಸುವವರ ಸುಂದರ ವರ್ಣನೆಯನ್ನು ಗೀತೆಯು ಆಸುರೀ ಸಂಪತ್ತಿಯನ್ನು ಹೇಳುವಾಗ ಹದಿನಾರನೇ ಅಧ್ಯಾಯದಲ್ಲಿ ವಿವರಿಸಿರುವದು

ಇಂಥವರನ್ನು ಇಲ್ಲವೆ ಇವರ ವರ್ತನವನ್ನು ಕುರಿತು ನೀತಿ ಅಥವಾ ಧರ್ಮ ಎಂಬ ಶಬ್ದಗಳನ್ನು ಉಪಯೋಗಿಸುವದು ವ್ಯರ್ಥ, ಯಾಕಂದರೆ ಅವರು ನೀತಿಧರ್ಮಗಳ ಕಲ್ಪನೆಗಳಿಂದ ಸಹಸ್ರಯೋಜನ ದೂರ ಇರುವರು !

### ೨೫ ದೂರದರ್ಶಿ ಸ್ವಾರ್ಥ

ಸ್ವಾರ್ಥವನ್ನು ಸ್ವಲ್ಪ ಸಂಯಮಿಸಬೇಕು, ಅದೆ ಸ್ವವೆಂದು ಚಾರ್ವಾಕರಂತೆ ತಿಳಿಯಬಾರದು, ಎನ್ನು ಪಕ್ಷವೊಂದು ಇರುವದು. ಪರವಿಚಾರವು ಕೇವಲ ತುಚ್ಛವೆಂದು ಈ ಪಕ್ಷವು ಎಣಿಸುವದಿಲ್ಲ. ಇದರಲ್ಲಿಯೂ 'ನಾನು' ಎಂಬುದೆ ಮಧ್ಯಬಿಂದುವು. 'ಪರಸುಖದ ವಿಚಾರವನ್ನು ಪೂರ್ಣ ಬಿಟ್ಟರೆ ನನ್ನ ಸುಖವು ಅಸಾಧ್ಯವು, ನನಗೆ ಪೂರ್ಣ ಸುಖವಾಗಬೇಕಾದರೆ ನಾನು ಎರಡನೆಯವರ ಸುಖಕ್ಕೆ ಅಡ್ಡಿ ಮಾಡಬಾರದು, ಎರಡನೆಯವರೊಡನೆ ಬಡಿದಾಡಿದರೆ ನನಗೆ ಸುಖವಾಗದು,' ಈ ರೀತಿ ಈ ಪಕ್ಷದವನು ಪರರನ್ನು ಬಗೆಯುವನು, ಆದರೆ ಅದು ತನ್ನ ಸುಖರಕ್ಷಣಕ್ಕಾಗಿ ಮತ್ತು ಆ ಪೂರ್ತಿಯೆ. ತನ್ನ ಸುಖದಲ್ಲಿ ಅಡಚಣಿಗಳು ಬಾರದೆ ಹೋದರೆ ಅವನು ಪರವಿಚಾರವನ್ನು ಮಾಡುವ ಗೋಜಿಗೆ ಹೋಗನು. ಪರವಿಚಾರ ಮಾಡುವ ಪ್ರಸಂಗವು ಬಂದಾಗ ಸ್ವವಿಚಾರವನ್ನು ಅಳಿಸದೆ ಅವನು ಅದನ್ನೇ ಪ್ರಧಾನವಾಗಿ ಇಡುವನು. ಕರುಣೆ ಹುಟ್ಟಿ ಪರರಿಗೆ ಸಹಾಯ ಮಾಡಿದರೂ ಅವನು ಕರುಣೆಯ ಮೂಲಕ ಆದ ತನ್ನ ದುಃಖವನ್ನು ದೂರಮಾಡುವುದಕ್ಕಾಗಿಯೆ ಹಾಗೆ

ಮಾಡುವನು. ಎರಡನೆಯವನು ತನಗೆ ಹೊಡೆಯಬಾರದೆಂದು ಅವನು ಪರರಿಗೆ ಹೊಡೆಯನು, ಪರರು ತನ್ನನ್ನು ರಕ್ಕಿಸುವ ರೆಂಬ ಭಯದಿಂದ ಅವನು ಪರರನ್ನು ರಕ್ಷಿಸನು, ಪರರು ಸ್ವಧನವನ್ನು ಅಪಹರಿಸಬಾರದೆಂಬ ವಿಚಾರದಿಂದ ಅವನು ಪರಧನವನ್ನು ಅಪಹರಿಸನು. ಅವನು ಪರರನ್ನು [illegible] ರಿತು ಮಾಡುವ ವಿಚಾರದಲ್ಲಿ ಮತ್ತು ಆಚಾರದಲ್ಲಿ 'ಸ[illegible]ಕಾರ ವನ್ನು ಮುಖ್ಯವಾಗಿ ಇಟ್ಟುಕೊಳ್ಳುವನು. '[illegible]ರ ವನ್ನು ಬದಿಗಿರಿಸುವದು ಮನುಷ್ಯಸ್ವಭಾವಕ್ಕೆ ವಿ[illegible]ದು ಅವನ ಭಾವನೆಯು. ಪಾಶ್ಚಿಮಾತ್ಯ ಪಂಡಿತರು ಇದಕ್ಕೆ 'ದೂರ ದರ್ಶಿಸ್ವಾರ್ಥ' ಪಕ್ಷವೆಂಬ ಹೆಸರನ್ನು ಕೊಟ್ಟಿರುವರು. ಈ ವಿಚಾರಸರಣಿಯಲ್ಲಿ ಏನಾದರೂ ನೀತಿ ಎಂಬುದು ಇದ್ದರೆ ಅದು ಸ್ವಾರ್ಥಮೂಲಕವೆ ಇರುವದು.

### ೨೬ ಸಾಮಾನ್ಯ ದೃಷ್ಟಿ

'ನಿರಂಕುಶ ಸ್ವಾರ್ಥ' ಮತ್ತು 'ದೂರದರ್ಶಿ ಸ್ವಾರ್ಥ' ಇವೆರಡಲ್ಲದೆ 'ಜಾಣತನದ ಸ್ವಾರ್ಥ' ಅಥವಾ 'ಉದಾತ್ತ ಸ್ವಾರ್ಥ' ಎಂಬ ಮೂರನೆಯ ವರ್ಗವೊಂದಿರುವದು. ಮನುಷ್ಯನ ಸ್ವಭಾವವು ಕೇವಲ ಸ್ವಾರ್ಥಮಯವಿಲ್ಲ' ಪರಾರ್ಥವೃತ್ತಿಯೂ ಮನುಷ್ಯನಲ್ಲಿ ಸ್ವಾಭಾವಿಕವಿರುವದು. ಆದುದರಿಂದ ಈ ಎರಡೂ ವೃತ್ತಿಗಳಿಗನುಸರಿಸಿ ನಾವು ಆಚರಿಸತಕ್ಕದ್ದು, ಎಂದು ಈ ಮೂರನೇ ವರ್ಗದ ಮತವು. ಸ್ವಾರ್ಥಕ್ಕಾಗಿ ಪರಾರ್ಥವನ್ನು, ಪರಾರ್ಥಕ್ಕಾಗಿ ಸ್ವಾರ್ಥವನ್ನು ನಾವು ಕೆಡಿಸಕೂಡದು, ಎಂದು ಈ ಸಂಪ್ರದಾಯದವರು

ಹೇಳುವರು. ಆದರೆ ವ್ಯವಹಾರದಲ್ಲಿ ಈ ರೀತಿ ಸ್ವಾರ್ಥಪರಾರ್ಥಗಳ ತೂಕವನ್ನು ಸತತ ಸಮವಿಡುವದು ಅಸಂಭವವು ಮತ್ತು ತಿಳಿದು ಅಥವಾ ತಿಳಿಯದೆ ಮನುಷ್ಯನು ಸ್ವಾರ್ಥದ ಕಡೆಗೆ ಒಲಿಯುವನು ಹಾಗೂ ಕೊನೆಗೆ ಅವನ ವರ್ತನದಲ್ಲಿ ಪರಾರ್ಥಕ್ಕಿಂತ ಸ್ವಾರ್ಥವೆ ಹೆಚ್ಚು ತೋರಿಬರುವದು. ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಾಃ ಸ್ವಾರ್ಥಾವಿರೋಧೇನ ಯೇ—'ಸ್ವಾರ್ಥಕ್ಕೆ ಬಾಧೆ ಬರದಂತೆ ಪರಾರ್ಥ ಸಾಧನದ ಉದ್ಯೋಗ ಮಾಡುವವರು,' ಎಂದು ಭರ್ತೃಹರಿಯು ಈ ವರ್ಗವನ್ನು ವರ್ಣಿಸಿರುವನು. ಜನಸಾಮಾನ್ಯರು ಈ ರೀತಿ ವರ್ತಿಸುವರು. ಆದರೆ ಇಂಥ ಸಾಮಾನ್ಯ ತತ್ವದ ಆಧಾರದಿಂದ ವೀರರು, ಶೂರರು, ಜ್ಞಾನಿಗಳು, ಭಕ್ತರು, ಸಮದರ್ಶಿಗಳು, ಸ್ಥಿತಪ್ರಜ್ಞರು ತಮ್ಮ ಆಚರಣವನ್ನು ನಿರ್ಣಯಿಸಲಾರರು ಮತ್ತು ಇಂಥ ವೀರಾದಿ ಮಹನೀಯರನ್ನು ಬದಿಗಿರಿಸಿ ನಾವು ನೀತಿನಿರ್ಣಯವನ್ನು ಮಾಡತೊಡಗಿದರೆ ಅಥವಾ ನೀತಿಶಾಸ್ತ್ರವನ್ನು ರಚಿಸತೊಡಗಿದರೆ ಅದು ಮದುಮಗನನ್ನು ಬಿಟ್ಟು ಮದುವೆಯನ್ನಾರಂಭಿಸಿದಂತಾಗುವದು. ಹೀಗೆ ಮಾಡಿದರೆ ನೀತಿಧರ್ಮದ ಮಹತ್ವವು ಕಡಿಮೆಯಾಗಿ ಮಾನವ ಜಾತಿಯ ವಿಕಾಸವು ಕುಂಠಿತವಾಗುವದು.

### ೨೭ ಸಾರ್ವಜನಿಕ ಸುಖದ ದೃಷ್ಟಿ

ವ್ಯಕ್ತಿದೃಷ್ಟಿಯಿಂದ ನೀತಿನಿರ್ಣಯವನ್ನು ಮಾಡುವ ಹಲವು ಆಧಿಭೌತಿಕ ಮತಗಳನ್ನು ಮೇಲೆ ಹೇಳಿದಂತಾಯಿತು.

ಆದರೆ ಎಲ್ಲಕ್ಕೂ ಶ್ರೇಷ್ಠವಾದ ಆಧಿಭೌತಿಕ ಮತವು ಇವುಗಳಿಗಿಂತ ಬೇರೆ ಇರುವದು ಮತ್ತು ಒಬ್ಬನ ಸುಖಕ್ಕಿಂತ ಇಡೀ ಮಾನವ ಜಾತಿಯ ಸುಖದ ವಿಚಾರಮಾಡಿ ನೀತಿಶಾಸ್ತ್ರವನ್ನು ರಚಿಸಬೇಕೆಂದು ಆ ಮತವು ಪ್ರತಿಪಾದಿಸುವದು. ಇನ್ನು ವ್ಯವಹಾರದಲ್ಲಿ ನಿರಪವಾದವಾಗಿ ಎಲ್ಲರ ಸುಖವನ್ನು ಸಾಧಿಸುವದು ಸಂಭವನೀಯವಿಲ್ಲದ್ದರಿಂದ 'ಬಹುಜನರ ಬಹು ಸುಖ'ವನ್ನು ಸಾಧಿಸುವದೆ ಈ ಮತದವರ ಧ್ಯೇಯವಾಗಿದೆ. ಯಾವ ಕರ್ಮದಿಂದ ಬಹು ಜನರಿಗೆ ಬಹುಸುಖವು ಆಗುವದೊ ಅದು ನೈತಿಕ ಕರ್ಮವು, ತದ್ವಿರುದ್ಧವಿದ್ದುದು ಅನೀತಿಕರವು, ಸ್ವಾರ್ಥಕ್ಕಿಂತ ಪರಾರ್ಥವು ಹೆಚ್ಚಿನದು, ಎಂಬ ವಿಚಾರಗಳಿಂದ ಕರ್ಮಗುಣದ ನಿರ್ಣಯವನ್ನು ಮಾಡಬೇಕೆಂದು ಈ ಪಂಥದ ಮತವು. ಕೇವಲ ಬಾಹ್ಯ ಪರಿಣಾಮವನ್ನು ನೋಡಿ ಕರ್ಮದ ವಿಚಾರ ಮಾಡಬೇಕಾಗಿದ್ದರೆ ಇದಕ್ಕೂ ಒಳಿತಾದ ರೀತಿಯೆ ಇಲ್ಲವೆನ್ನಬಹುದು. ಗೀತೆಯಲ್ಲಿ ಸಹ ಭಕ್ತರು ಮತ್ತು ಬ್ರಹ್ಮಭೂತ ಪುರುಷರು, ಸರ್ವಭೂತಹಿತೇ ರತಾಃ (೫.೨೫; ೧೨.೪) 'ಭೂತಮಾತ್ರರ ಹಿತಸಾಧನದಲ್ಲಿ ಮಗ್ನರು' ಎಂದು ಅವರ ವರ್ಣನೆ ಇರುವದು. ಈ ಮತ ಮತ್ತು ಗೀತೆಯ ಮತ ಇವುಗಳಲ್ಲಿ ಈ ಬಗೆಯ ಬಾಹ್ಯ ಸಾಮ್ಯವು ಕಂಡರೂ ಇವುಗಳ ನಡುವೆ ಮಹತ್ವದ ತಾತ್ವಿಕ ಭೇದವಿರುವದೆಂಬುದನ್ನು ಮರೆಯಕೂಡದು. ಬಹುಜನರ ಬಹುಸುಖವು ಯಾತರಲ್ಲಿರುವದು ಮತ್ತು ಅದನ್ನು ಯಾವ ಒರೆಗೆ ಹಚ್ಚಿ ನಿಶ್ಚಯಿಸಬೇಕು ಇದನ್ನು ಈ ಮತದವರು ಹೇಳುವದಿಲ್ಲ.

ಇದಲ್ಲದೆ ಬರಿಯ ಸಂಖ್ಯಾಪ್ರಮಾಣದಿಂದ ನೀತಿ-ಅನೀತಿಗಳನ್ನು ನಿರ್ಣಯಿಸುವದು ಯಾವಾಗಲೂ ಯೋಗ್ಯವೆ ಆದೀತೆಂದು ಹೇಳಲಾಗದು. ನಾಲ್ಕೆಂಟು ಜನರದೊಂದು ಹತ್ತಿಪ್ಪತ್ತು ಜನರ ದೊಂದು ಹೀಗೆ ಎರಡು ಪಕ್ಷಗಳಿರುವವೆಂದು ಕಲ್ಪಿಸುವ. ದೊಡ್ಡ ಪಕ್ಷದವರು ಸಣ್ಣ ಪಕ್ಷವನ್ನು ಸದೆಬಡಿದು, ಎಲ್ಲ ಧನ ವನ್ನು ಕಸುಕೊಂಡು ತಮ್ಮ ಸುಖಕ್ಕಾಗಿ ಅದನ್ನು ವೆಚ್ಚ ಮಾಡಿದರೆಂದು ತಿಳಿದರೆ ಇದರಲ್ಲಿ ಬಹುಜನರ ಸುಖವಾಯಿ ತೆಂಬುದೇನೊ ನಿಜವು. ಆದರೆ ದೊಡ್ಡ ಪಕ್ಷವು ನೀತಿಯಿಂದ ವರ್ತಿಸಿತು, ಎಂದು ಹೇಳಲಿಕ್ಕಾಗದು. ಸ್ವಾರ್ಥಕ್ಕಿಂತ ಪರಾ ರ್ಥವು ಹೆಚ್ಚಿನದು, ಎಂದು ಏಕೆ ತಿಳಿಯಬೇಕು ಇದರ ಉಪ ಪತ್ತಿಯೂ ಈ ಮತದವರಿಂದ ಹೇಳಲ್ಪಟ್ಟಿಲ್ಲ. ಇದು ಸಹಜ ಸ್ವಭಾವವು,ಹೀಗೆ ತಿಳಿಯುವದು ಮನುಷ್ಯನ ಹುಟ್ಟು ಧರ್ಮ ವಿದೆ, ಎಂದು ಇವರು ಅನ್ನುವರು. ಯಾವದೊಂದು ಕರ್ಮವು ಬಹುಜನರ ಬಹು ಸುಖವನ್ನು ಸಾಧಿಸುವಂತಹದಿದ್ದರೂ ಕರ್ತನ ವೃತ್ತಿ, ವಾಸನೆ, ಬುದ್ಧಿ ಇವುಗಳನ್ನು ವಿಚಾರಿಸದೆ ನೀತಿ ಅಥವಾ ಧರ್ಮದ ಚರ್ಚೆಯು ಪರಿಪೂರ್ಣವಾಗದು. ದಾನಮಾಡುವದು ತನ್ನ ಕರ್ತವ್ಯವೆಂದು ಒಬ್ಬನು ದಾನ ಮಾಡುವನು, ಇನ್ನೊಬ್ಬನು ಯಶ, ಕೀರ್ತಿ, ಪ್ರತಿಷ್ಠೆಗಾಗಿ ದಾನ ಮಾಡುವನು. ಇವರಿಬ್ಬರ ಬಾಹ್ಯಕರ್ಮಗಳು ಸರಿ ಸಮಾನವಿದ್ದರೂ ಅವುಗಳ ನೈತಿಕ ಬೆಲೆಯು ಸಮಾನವಿಲ್ಲ. ಆದರಪೂರ್ವಕವಾಗಿ ಆಮಂತ್ರಿಸಿ ಮಹಾರಾಜ ದುರ್ಯೋ ಧನನು ತನಗೆ ಮಿಷ್ಟಾನ್ನವನ್ನು ನೀಡಲು ಸಿದ್ಧನಾಗಿದ್ದರೂ

ಅದನ್ನು ಬಿಟ್ಟು ವಿದುರನ ಒಣ ರೊಟ್ಟಿಯೆ ಲೇಸೆಂದು ಶ್ರೀ ಕೃಷ್ಣನು ಅವನ ಮನೆಯನ್ನು ಸೇರಿದನು. ಇಲ್ಲಿ ಶ್ರೀಕೃಷ್ಣನು ರಾಜರಾಜರ ತೋರಿಕೆಯ ಆದರಕ್ಕಿಂತ ವಿನಮ್ರ ಭಕ್ತಿಭಾವ ನೆಗೆ ಹೆಚ್ಚು ನೈತಿಕ ಮಹತ್ವವನ್ನು ಕೊಟ್ಟನೆಂಬುದು ಸ್ಪಷ್ಟ ವಿದೆ. ಯಾವನ ವೃತ್ತಿಯು ನಿರ್ಮಲವಿಲ್ಲವೊ ಮತ್ತು ಯಾವನ ಪರಾರ್ಥ ಕರ್ಮವು ಕೂಡ ಒಳಗೆ ಸ್ವಾರ್ಥಮೂಲಕವಿರು ವದೊ ಅವನನ್ನು ನಂಬುವದು ಕಠಿಣ. ಕರ್ತವ್ಯವೆಂದು ಮಾಡಿದ ಕರ್ಮ ಮತ್ತು ಭಯಮೂಲಕ ಇಲ್ಲವೆ ಲಜ್ಜೆಯಿಂದ ಅಥವಾ ಯಶಕೀರ್ತಿ ಮುಂತಾದವುಗಳನ್ನು ಪಡೆಯಬೇಕೆಂದು ಮಾಡಿದ ಅದೇ ಕರ್ಮ, ಇವುಗಳಲ್ಲಿ ಮಹದಂತರವಿರುವದು. ಸ್ವಾರ್ಥಬುದ್ಧಿಯಿಂದ ಮಾಡಿದ ಪರಾರ್ಥಕರ್ಮವು ಸಹ ಹೀನವೇ ಇರುವದು. ಆದರೆ ನಿಃಸ್ವಾರ್ಥಬುದ್ಧಿಯಿಂದ ಮಾಡಿದ ಅದೇ ಕರ್ಮವು ಶ್ರೇಷ್ಠವೆನಿಸುವದು ಮತ್ತು ನಿರ್ಮಲ ಜ್ಯೋತಿಯಂತೆ ಪ್ರಕಾಶಿಸುವದು. ಈ ರೀತಿ 'ಬಹು ಸುಖ' ಎಂಬ ಕರ್ಮದ ಕೇವಲ ಬಾಹ್ಯಪರಿಣಾಮದ ಆಧಾರ ದಿಂದ ನೀತಿಯನ್ನು ನಿರ್ಣಯಿಸುವದು ಅಥವಾ ನೀತಿಶಾಸ್ತ್ರ ವನ್ನು ರಚಿಸುವದು ಬಹಳೇ ದುಸ್ತರವು.

**೨೮ ಮನೋದೇವತೆ**

ಇನ್ನು ಕರ್ತನ ಬುದ್ಧಿಯ ವಿಚಾರ ಮಾಡದೆ ನೀತಿನಿರ್ಣ ಯವು ಸಾಧ್ಯವಿಲ್ಲ, ಎಂಬ ತತ್ವವನ್ನು ಮನ್ನಿಸಿ, ಕಾರ್ಯಾ ಕಾರ್ಯಗಳ ತುಲನೆ ಮಾಡಿ ನಿರ್ಣಯಿಸುವ ಮನೋದೇವತೆ ಎಂಬ ಶಕ್ತಿಯೊಂದು ಮನುಷ್ಯನ ಮನಸಿನಲ್ಲಿ ಇದೆ, ತತ್ಪ್ರೀ

ರಣೆಯಿಂದ ನಡೆದರೆ ಕರ್ಮವು ನೀತಿಮಯವಾಗುವದು, ಎಂದು ಹಲವರು ನಂಬುವರು. ಆದರೆ ಬುದ್ಧಿಯನ್ನುಳಿದು ಮನೋದೇವತೆ ಎಂಬ ಪ್ರತ್ಯೇಕ ಶಕ್ತಿ ಯಾವುದೂ ಇಲ್ಲ. ಯಾವ ಬುದ್ಧಿಯು ಇಂದ್ರಿಯವಿಷಯಗಳ ಅನುಭವವನ್ನು ಪಡೆಯುವದೊ ಮತ್ತು ಅದರ ನಿರ್ಣಯಮಾಡುವದೊ ಅದೇ ಬುದ್ಧಿಯು ಸಾರಾಸಾರ ವಿಚಾರ ಮಾಡಿ ಒಂದಕ್ಕೊಂದನ್ನು ಹೋಲಿಸಿ ಕಾರ್ಯಾಕಾರ್ಯದ ನಿರ್ಣಯಮಾಡುವದು. ಮನುಷ್ಯನಲ್ಲಿದ್ದ ಸದಸದ್ವಿವೇಕ ಶಕ್ತಿಯೂ ಈ ಬುದ್ಧಿಯ ಒಂದು ಲಕ್ಷಣವೇ ಇರುವದು. ವ್ಯವಹಾರದಲ್ಲಿ ಮನೋ ದೇವತೆ ಎಂದೆನಿಸುವುದೆ ಸದಸದ್ವಿವೇಕಶಕ್ತಿಯು. ಅದು ಬುದ್ಧಿಯದೆ ಒಂದು ಗುಣವು. ಮನೋದೇವತೆಯು ಮಾಡು ವದು ಮಾಡಿಸುವದು, ಎಂದರೆ ಬುದ್ಧಿಯು ಮಾಡುವದು ಮಾಡಿಸುವದು, ಎಂದೇ ಅರ್ಥ. ಆದರೆ ಬೇರೆ ಬೇರೆ ಜನರ ಬುದ್ಧಿಯು ಬೇರೆ ಬೇರೆ ನಿರ್ಣಯಗಳನ್ನು ಕೊಡುವದರಿಂದ ಯಾವ ನಿರ್ಣಯವನ್ನು ಅನುಸರಿಸಬೇಕು ಮತ್ತು ಯಾವ ನಿರ್ಣಯವು ಎಲ್ಲಕ್ಕೂ ಶ್ರೇಷ್ಠವು ಇದು ಅನಿಶ್ಚಿತವೇ ಉಳಿಯುವದು.

### ೨೯ ಮೇಲಿನ ಮತದ ನಿರರ್ಥಕತೆ

ಈ ಪ್ರಕಾರ, ಮೇಲಿನ ಯಾವದೇ ಮತಮತಾಂತರ ಗಳ ಆಧಾರದಿಂದ ನಿಚ್ಚಳವಾದ ನೀತಿಶಾಸ್ತ್ರವನ್ನು ರಚಿಸು ವದು ಶಕ್ಯವೆ ತೋರುವದಿಲ್ಲ. ಇನ್ನು ನೀತಿಯವಿನಾ ಸಂಸಾ ರದ ವ್ಯವಹಾರವೂ ಸುಸೂತ್ರ ನಡೆಯಲಾರದು. ಆದುದರಿಂದ

ನೀತಿಯ ಬೀಜವನ್ನು ನಾವು ಹುಡುಕಲಿಕ್ಕೆಬೇಕು. ಕರ್ಮದ ಬಾಹ್ಯಸ್ವರೂಪವನ್ನವಲಂಬಿಸಿ ನೀತಿ ಅನೀತಿಗಳನ್ನು ನಿಶ್ಚಯಿಸುವದು ಅಶಕ್ಯವೆಂಬುದು ಮೇಲಿನ ವಿವೇಚನದಿಂದ ಸ್ಪಷ್ಟವಾಗಿದೆ. ಯಾವನೊಬ್ಬನ ಕೈಯಿಂದ ತಿಳಿಯದೆ ಪ್ರಾಣಹಾನಿ ಆದಾಕ್ಷಣಕ್ಕೆ ಅವನು ಅನೀತಿಯನ್ನಾಚರಿಸಿದಂತೆ ಅಥವಾ ಹಿಂಸೆ ಮಾಡಿದಂತೆ ಆಗುವದಿಲ್ಲ. ಅಕಸ್ಮಾತ್ ಆದ ಪ್ರಾಣಘಾತದಲ್ಲಿ ಪ್ರಾಣಹರಣ ಮಾಡಬೇಕೆಂಬ ಉದ್ದೇಶದ ಪೂರ್ಣ ಅಭಾವವಿರುವುದರಿಂದ ಆ ಕರ್ಮವು ದುಃಖದಾಯಕವೆನಿಸಿದರೂ ಗರ್ಹ್ಯವೂ ಅಲ್ಲ ದಂಡನೀಯವೂ ಅಲ್ಲ. ಒಂದು ಕರ್ಮದ ಬಾಹ್ಯರೂಪವು ಪರರಿಗೆ ಹಿತಕರವಿದ್ದರೂ ಕರ್ತನ ವೃತ್ತಿಯು ಮಲಿನವಿದ್ದರೆ ಆ ಕರ್ಮವು ನೈತಿಕವೆನಿಸದು. ತಾತ್ಪರ್ಯವೇನಂದರೆ ಕರ್ಮದ ನೀತಿಯು ಅಥವಾ ಧಾರ್ಮಿಕತೆಯು ಕರ್ತನ ವೃತ್ತಿಯನ್ನೆ ಮುಖ್ಯವಾಗಿ ಅವಲಂಬಿಸಿದೆ. ಆದುದರಿಂದಲೆ, ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ (೨. ೪೯) 'ಸಾಮ್ಯಬುದ್ಧಿಗಿಂತ ಕರ್ಮದ ಬಾಹ್ಯಸ್ವರೂಪವು ಅತ್ಯಂತ ಗೌಣವೆಂದು' ಗೀತೆಯ ವಚನವಿರುವದು. ಕರ್ಮದ ಸಾರಾಸಾರತೆಯ ಪರಿಕ್ಷೆಯು ಕರ್ಮದ ಬಾಹ್ಯಸ್ವರೂಪದ ಒರೆಗಲ್ಲಿನಿಂದ ಆಗದೆ ಕರ್ತನ ಬುದ್ಧಿಯ ಒರೆಗಲ್ಲಿನಿಂದ ಆಗುವದು. ಆದುದರಿಂದ ಯಾವ ಬುದ್ಧಿಯಿಂದ ಮಾಡಿದ ಕಾರ್ಯವು ನೈತಿಕವು ಯಾವದು ಅನೈತಿಕವು, ಯಾವ ಬುದ್ಧಿಯು ಎಲ್ಲಕ್ಕೂ ಶ್ರೇಷ್ಠವು, ಆತ್ಮನಿಷ್ಠ ಬುದ್ಧಿಯು ಶ್ರೇಷ್ಠವೆಂದರೆ ಅದೇಕೆ, ಇದರ ವಿಚಾರವು ಈಗ ಅವಶ್ಯವು.

ಯಾವ ಬುದ್ಧಿಯು ಶ್ರೇಷ್ಠವು ಎಂಬುದನ್ನು ನಿರ್ಣಯಿಸುವಾಗ ಆತ್ಮಾನಾತ್ಮವಿವೇಕದ ಚರ್ಚೆಯೂ ಅನಿವಾರ್ಯವು ಹಾಗೂ ಸುಖವೆ ಮನುಷ್ಯಮಾತ್ರರ ಅಂತಿಮ ಧ್ಯೇಯವಿರುವುದರಿಂದ ಸುಖದುಃಖವಿವೇಕದ ವಿಚಾರವೂ ಅವಶ್ಯವು. ಆದುದರಿಂದ ಆ ವಿಷಯಗಳನ್ನು ಕುರಿತು ಇನ್ನು ವಿವೇಚನೆ ಮಾಡುವ. ಸುಖವೆಂದರೇನು ದುಃಖವೆಂದರೇನು, ಯಾವ ಸುಖವು ಹೆಚ್ಚಿನದು ಇದನ್ನು ಮೊದಲು ಮುಂದಿನ ಪ್ರಕರಣದಲ್ಲಿ ವಿಚಾರಿಸುವ.

## ೫ ಸುಖ ಮತ್ತು ದುಃಖ

### ೩೦ ಸುಖದ ಹಂಬಲ

ಪ್ರತಿಯೊಬ್ಬ ಮನುಷ್ಯನು ಸುಖದ ಪ್ರಾಪ್ತಿಗಾಗಿ ಮತ್ತು ದುಃಖದ ನಿವೃತ್ತಿಗಾಗಿ ಯತ್ನಿಸುವನು. ದುಃಖಾದು ದ್ವಿಜತೇ ಸರ್ವಃ ಸರ್ವಸ್ಯ ಸುಖಮೀಪ್ಸಿತಮ್ (ಮ. ಭಾ. ಶಾಂತಿಪರ್ವ: ೧೩೯. ೬೧) 'ಎಲ್ಲರಿಗೂ ದುಃಖದ ಬೇಸರವು ಮತ್ತು ಸುಖದ ಇಚ್ಛೆಯೂ ಇರುವದು.' ಸುಖಕ್ಕಿಂತ ಹೆಚ್ಚಿನ ಫಲವು ಈ ಜಗತ್ತಿನಲ್ಲಿ ಯಾವುದೂ ಇಲ್ಲ. ಈ ಸಿದ್ಧಾಂತವು ಸರ್ವರಿಗೂ ಸಮಾನವಾಗಿ ಸಮ್ಮತವಿದ್ದರೂ ಸುಖಸ್ವರೂಪದ ಕಲ್ಪನೆಗಳಲ್ಲಿ ಮತಭೇದಗಳಿರುವವು. ತನ್ಮೂಲಕ ಬೇರೆ ಬೇರೆ ಸಂಪ್ರದಾಯಗಳೂ ಪಂಥಗಳೂ ಉಂಟಾಗಿರುವವು.

### ೩೧ ಸುಖದುಃಖಗಳ ಲಕ್ಷಣಗಳು

ನೈಯಾಯಿಕರು ಸುಖದುಃಖಗಳ ವ್ಯಾಖ್ಯೆಯನ್ನು ಈ ಕೆಳಗಿನಂತೆ ಕೊಟ್ಟಿದ್ದಾರೆ; ಅನುಕೂಲವೇದನೀಯಂ ಸುಖಂ ಪ್ರತಿಕೂಲವೇದನೀಯಂ ದುಃಖಮ್–'ಅನುಕೂಲ ಸಂವೇದನವೆ ಸುಖವು ಪ್ರತಿಕೂಲ ಸಂವೇದನವೆ ದುಃಖವು.' ಅರ್ಥಾತ್ ಸುಖ ದುಃಖ ಇವು ಎರಡು ಬೇರೆ ಬೇರೆ ಅನುಭವಗಳಿರುವವು ಮತ್ತು ಅವು ಮನುಷ್ಯನಿಗೆ ಶರೀರದ ಅಥವಾ ಮನಸಿನ ಮುಖಾಂತರ ಆಗುವವು, ಎಂಬುದೆ ಇದರ ತಾತ್ಪರ್ಯವು.

ಸುಖದುಃಖಗಳ ಭೋಗವು ಅಂತಃಕರಣದಲ್ಲಿಯೆ ಆಗುತ್ತಿದ್ದರೂ ಶರೀರದ ಮುಖಾಂತರ ಆಗುವ ಸುಖದುಃಖಗಳು ಶಾರೀರಿಕ, ಮತ್ತು ಮನಸಿನ ಮುಖಾಂತರ ಆಗುವ ಸುಖದುಃಖಗಳು ಮಾನಸಿಕ ಎಂದು ಎನಿಸುವವು.

**೩.೨ ಸುಖ ಮತ್ತು ದುಃಖ ಇವು ಪ್ರತ್ಯೇಕ ಸಂವೇದನಗಳು**

ಇನ್ನು ಸುಖದುಃಖಗಳ ಪರಸ್ಪರ ಸಂಬಂಧವೇನು ನೋಡುವ. ಒಂದು ಎರಡನೆಯದರ ಅಭಾವರೂಪವೊ ಅಥವಾ ಎರಡೂ ಸ್ವತಂತ್ರ ಅನುಭವಗಳೊ ಎಂಬುದೊಂದು ಪ್ರಶ್ನೆಯು. ದುಃಖದ ಅಭಾವವೆ ಸುಖವು, ಎಂದು ಕೆಲವರು ತಿಳಿಯುವರು, ಮತ್ತು 'ಮನಸಿನಲ್ಲಿ ಯಾವದೊಂದು ವಸ್ತುವಿನ ಬಗ್ಗೆ ಮೊದಲು ತೃಷ್ಣೆ–ತೀವ್ರ ಇಚ್ಛೆ ಉಂಟಾಗುವದು, ಅದರ ಮೂಲಕ ದುಃಖವು ಉದ್ಭವಿಸುವದು. ಅದನ್ನು ಹೋಗಲಾಡಿಸಲು ಯತ್ನಮಾಡಲಾಗಿ ತೃಷ್ಣೆಯು ಹಿಂಗಿ ಸುಖವು ಆಗುವದು. ಹೀಗೆ, ತೃಷ್ಣೆಯೆ ದುಃಖದ ಮೂಲವು, ತೃಷ್ಣೆಯನ್ನು ತ್ಯಜಿಸುವದರಲ್ಲಿಯೆ ಪುರುಷಾರ್ಥವಿರುವದು; ಆದುದರಿಂದ ತೃಷ್ಣಾಮೂಲಕ ಸಂಸಾರವನ್ನು ತ್ಯಜಿಸಿ ಸನ್ಯಾಸವನ್ನಂಗೀಕರಿಸುವುದೆ ಸುಖದ ರಾಜಮಾರ್ಗವು,' ಎಂದು ಪ್ರತಿಪಾದಸುವರು. ಆದರೆ ಗೀತೆಗೆ ಈ ಅಭಿಪ್ರಾಯವು ಮಾನ್ಯವಿಲ್ಲ. ಎಲ್ಲ ಸುಖದುಃಖಗಳ ಮೂಲವು ತೃಷ್ಣೆಯಲ್ಲಿಯೆ ಇದೆ,ಎಂದು ಹೇಳುವದುಅನುಭವಸಿದ್ಧವಾದ ಮಾತಲ್ಲ. ಇಂದ್ರಿಯ ಮತ್ತು ಅದರ ವಿಷಯ ಇವುಗಳ ಸಂಬಂಧವೂ ಆ ಸಂಬಂಧದಿಂದುಂಟಾದ ಸುಖದುಃಖಗಳೂ ಸ್ವಾಭಾವಿಕವಿರುವವು.

ಶರೀರಕ್ಕೆ ಅಕಸ್ಮಾತ್ತಾಗಿ ಆದ ಅಗ್ನಿಸ್ಪರ್ಶದಿಂದ ದುಃಖವಾ
ಗುವದು, ಅಥವಾ ಮೊಟ್ಟ ಮೊದಲು ಸಕ್ಕರೆ ಬಾಯಲ್ಲಿಟ್ಟಾಗ
ಅದು ಸವಿ ಹತ್ತುವದು; ಈ ಎರಡೂ ಉದಾಹರಣೆಗಳಲ್ಲಿ
ತೃಷ್ಣೆ ಮತ್ತು ಅದರ ತೃಪ್ತಿ ಇವುಗಳ ಸಂಬಂಧವಿಲ್ಲ. ದಾಹದ
ದುಃಖ ಸಕ್ಕರೆಯ ಸವಿ, ಇವೆರಡೂ ಇಲ್ಲಿ ಸ್ವಾಭಾವಿಕವಿರು
ವವು. ಆದುದರಿಂದ ಎಲ್ಲ ಸುಖವು ತೃಷ್ಣೆಯ ಲಯದಿಂದ,
ಎಲ್ಲ ದುಃಖವು ತೃಷ್ಣೆಯ ಉತ್ಪತ್ತಿಯಿಂದ ಆಗುವದು,ಎಂದು
ಅನ್ನಲಿಕ್ಕಾಗದು. ಅವೆರಡು ಸ್ವತಂತ್ರ ಸಂವೇದನಗಳಿದ್ದು
ಶರೀರದ ಅಥವಾ ಮನಸಿನ ಮುಖಾಂತರ ಅವು ಅನುಭವಕ್ಕೆ
ಬರುವವು.

### ೩೩ ಸಂಯಮರಹಿತರ ಪಾಲಿಗೆ ದುಃಖವೆ

ಸುಖದುಃಖಗಳು ಸ್ವತಂತ್ರವಿರುವವು ಎಂದು ಒಪ್ಪಿ
ದರೂ ಸಂಸಾರವು ಸುಖಮಯವೋ ದುಃಖಮಯವೋ ಎಂಬ
ಇನ್ನೊಂದು ಪ್ರಶ್ನೆಯು ಎದುರಾಗುವದು. ಈ ಪ್ರಶ್ನೆಯ
ವಿಶೇಷ ಚರ್ಚೆಯು ಆವಶ್ಯಕವಿಲ್ಲ. ಸಂಸಾರವು ಕೇವಲ ಸುಖ
ಮಯವೂ ಇಲ್ಲ ದುಃಖಮಯವೂ ಇಲ್ಲ, ಅದು ಸುಖದುಃಖ
ಮಯವಿರುವದು, ಮತ್ತು ಈ ಸುಖದುಃಖಗಳ ಚಕ್ರವು
ಸತತ ತಿರುಗುವದು. ಈ ಸುಖದುಃಖದ ಬೆರಿಕೆಯಲ್ಲಿ ಸುಖದ
ಪ್ರಮಾಣವು ಹೆಚ್ಚೋ ದುಃಖದ ಪ್ರಮಾಣವು ಹೆಚ್ಚೋ ಎಂದು
ಕೇಳಿದರೆ ಅದನ್ನು ನಿರ್ಣಯಿಸಲು ನಿಶ್ಚಿತ ಸಾಧನವೇನೂ ಇಲ್ಲ
ಎಂದೇ ಹೇಳಬೇಕಾಗುವದು. ಆದರೂ ಮನುಷ್ಯನ ಮನಸಿ
ನಲ್ಲಿ ಹುಟ್ಟುವ ಸುಖದ ಇಚ್ಛೆ ಮತ್ತು ಅವನಿಗೆ ಪ್ರಾಪ್ತವಾದ

ಸುಖ ಈ ಎರಡರಲ್ಲಿಯ ಪ್ರಮಾಣವನ್ನು ನೋಡಿ ಅವನ ಸುಖದುಃಖಗಳ ಪ್ರಮಾಣದ ಕಲ್ಪನೆಯನ್ನು ಕಟ್ಟಬಹುದು. ಮನುಷ್ಯನ ಮನಸದಲ್ಲಿ ಅಸಂಖ್ಯ ಇಚ್ಛಾಲಹರಿಗಳು ಏಳುವವು. ಅವೆಲ್ಲವುಗಳನ್ನು ತೃಪ್ತಮಾಡುವದು ಸಾಧ್ಯವಿಲ್ಲ. ಉಪಭೋಗಕ್ಕಿಂತ ಇಚ್ಛೆಯ ಪ್ರಮಾಣವು ಯಾವಾಗಲೂ ಹೆಚ್ಚೇ ಇರುವುದರಿಂದ ಮನಸಿನಲ್ಲಿ ಅತೃಪ್ತ ಇಚ್ಛೆಗಳು ಯಾವಾಗಲೂ ಹಾಗೆಯೆ ಉಳಿಯುವವು. ಆ ಮೂಲಕ ದುಃಖದ ಪ್ರಮಾಣವು ನಿತ್ಯವೂ ಹೆಚ್ಚು ತೋರುವದು. ಗೀತೆಯು ಸಹ ಈ ಲೋಕಕ್ಕೆ ಅಸುಖವಮ್ (೯. ೩೩) 'ಸುಖರಹಿತ,' ಎಂಬ ವಿಶೇಷಣವನ್ನು ಹಚ್ಚಿದೆ. ಇಂದ್ರಿಯಭೋಗದ ಸ್ವರೂಪವನ್ನು ವಿಚಾರಿಸಿದರೆ ಮೇಲಿನ ಮಾತು ಹೆಚ್ಚು ಸ್ಪಷ್ಟವಾಗುವದು. ಕಾಮನೆಯು ಉಪಭೋಗದಿಂದ ಶಾಂತವಾಗದೆ ಹೆಚ್ಚು ಬಲಿಯುವದು, ನ.ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ (ಮನು: ೨. ೯೪) ಎಂದು ಸಾಮಾನ್ಯ ಅನುಭವವಿರುವದು. ಆದುದರಿಂದ ತಾತ್ಕಾಲಿಕ ಸುಖವು ಹೆಚ್ಚೇ ಆಗಲಿ ಕಡಿಮೆಯೇ ಆಗಲಿ, ಕಾಮನೆಯು ಎಂದೂ ಪೂರ್ಣವಾಗದೆ ಇರುವುದರಿಂದ ದುಃಖದ ಪ್ರಮಾಣವೇ ಹೆಚ್ಚು ಇರುವದೆಂದು ಭಾವನೆಯಾಗುವದು. ಇದು ಇಂದ್ರಿಯಗೋಚರ ಸುಖದುಃಖಗಳ ವಿಚಾರವಾಯಿತು. ಈ ಮೇಲಿನ ಅನುಭವಗಳು ಸಂಯಮರಹಿತರನ್ನೂ ಪ್ರಯತ್ನಹೀನರನ್ನೂ ಸಂಬಂಧಿಸಿರುವವು. ಸಂಯಮಿಗಳ ಮತ್ತು ಪ್ರಯತ್ನಶೀಲರ ಅನುಭವವು ಬೇರೆ ಪ್ರಕಾರದ್ದಿರುವದು ಹಾಗೂ ಅವರು ಬೇರೆ ಬಗೆಯ ಶಾಂತಿಸುಖಗಳನ್ನು ಉಪಭೋಗಿಸುವರು.

### ೩೪ ಮನವೇ ಸುಖದುಃಖಗಳಿಗೆ ಆಧಾರವು

ಮನುಷ್ಯನು ತನ್ನ ಪಂಚೇಂದ್ರಿಯಗಳ ಸಹಾಯದಿಂದ ಈ ಜಗತ್ತಿನ ಅನುಭವವನ್ನು ಪಡೆಯುವನು. ಹೀಗಿದ್ದರೂ ಮನಸ್ಸಿನ ಧ್ಯಾನವು ಅತ್ತ ಇಲ್ಲದಿದ್ದರೆ ಇಂದ್ರಿಯವ್ಯಾಪಾರ ಗಳು ವ್ಯರ್ಥವಾಗುವವು. ವಸ್ತುವು ಕಣ್ಣಮುಂದೆ ಇದ್ದರೂ ಕಣ್ಣಿನೊಡನೆ ಮನಸಿನ ಸಂಯೋಗವಿಲ್ಲದಿದ್ದರೆ ಮನುಷ್ಯನಿಗೆ ಆ ವಸ್ತುವಿನ ಆಕಲನವಾಗದು.. ಇದರಅರ್ಥವೇನಂದರೆ ಇಂದ್ರಿಯಜನಿತ ಸುಖದುಃಖಗಳ ಅನುಭವಕ್ಕೆ ಕೊನೆಗೆ ಮನವೇ ಕಾರಣವು. ಮಾನಸಿಕ ಸುಖದುಃಖಗಳ ಆಧಾರ ವಂತೂ ಮನವೇ ಇರುವದು. ಒಟ್ಟಿಗೆ, ಶಾರೀರಿಕ ಅಥವಾ ಮಾನಸಿಕ ಸುಖದುಃಖಗಳ ಅನುಭವವು ಮನಸಿಗೇ ಆಗು ವದು ಮತ್ತು ಮನಸನ್ನು ಸಂಯಮಿಸುವದು ಎಲ್ಲರ ಸ್ವಾಧೀ ನವಿರುವದು. ಮನೋನಿಗ್ರಹವನ್ನು ಅಭ್ಯಸಿಸಿದರೆ ಚಂಚಲ ಸುಖದುಃಖಗಳ ಪರಿಣಾಮದಿಂದ ಅಲಿಪ್ತನಿದ್ದು ಮನುಷ್ಯನು ಒಂದು ಬಗೆಯ ಅಖಂಡ ಆನಂದಪ್ರವಾಹದಲ್ಲಿ ನಲಿದಾಡ ಬಲ್ಲನು. ಇದಕ್ಕಾಗಿ ಕರ್ಮತ್ಯಾಗದ ಅವಶ್ಯಕತೆ ಇಲ್ಲ. ಕರ್ಮಕ್ಕೂ ಸುಖದುಃಖಕ್ಕೂ ನಿಜವಾಗಿ ಯಾವ ಬಗೆಯ ಸಂಬಂಧವಿರುವದೆಂಬುದು ಯಥಾರ್ಥವಾಗಿ ತಿಳಿದರೆ ಮತ್ತು ಅದನ್ನು ಮನುಷ್ಯನು ಸತತ ಧ್ಯಾನದಲ್ಲಿಟ್ಟರೆ ಅವನ ಜೀವನದ ಸ್ವರೂಪವೇ ಬದಲಾಗುವದು ಮತ್ತು ಬಾಹ್ಯದಲ್ಲಿ ಬಿರು ಗಾಳಿಯಿಂದ ಚಲಬಿಚಲವಾದ ಸಮುದ್ರದಂತೆ ಅಶಾಂತ ಕಂಡರೂ ಅವನು ಅಂತರದಲ್ಲಿ ಮಾನಸಸರೋವರದ

ಶಾಂತಿಯನ್ನು ಅನುಭವಿಸುವನು. ಕರ್ಮದ ಆರಂಭ ಮಾದೊಡನೆ ಅದರ ಫಲವು ಅದರ ಬೆನ್ನಬಿಡದೆ ಸಾಗುವದು. ಕರ್ಮಾರಂಭದ ಪೂರ್ವದಲ್ಲಿ ಅದನ್ನು ಯಾವ ಬಗೆಯಿಂದ ಪೂರೈಸಬೇಕು ಇದರ ವಿಚಾರವಾದರೂ ಬಿಟ್ಟಿದ್ದಲ್ಲ; ಆದರೆ ಕರ್ಮಮಾಡುವಾಗ ಮತ್ತು ಯಾವ ಕರ್ಮವನ್ನು ಹೇಗೆ ಮಾಡಬೇಕು ಇದನ್ನು ನಿರ್ಣಯಿಸುವಾಗ ನಮ್ಮ ಮನೋ ವೃತ್ತಿಯು ಹೇಗೆ ಇರುವದು ಇದನ್ನು ನೋಡುವದು ಅವ ಶ್ಯವು. ನಾನು ಒಂದು ಕರ್ಮವನ್ನು ಆರಂಭಿಸಿ, ನನಗೆ ಈ ಕರ್ಮದ ಫಲವು ಈ ಪ್ರಕಾರ ದೊರೆಯುವದು, ಎಂದು ಮನ ಸಿನಲ್ಲಿ ಸತತ ನೆನೆಯುತ್ತ ಕುಳಿತರೆ ಆ ಕರ್ಮಫಲದ ಬಗ್ಗೆ ನನ್ನಲ್ಲಿ ಮಮತ್ವ, ಆಸಕ್ತಿ ಇವು ಉಂಟಾಗುವವು ಮತ್ತು ಅವುಗಳೊಡನೆ ದುಃಖಪರಂಪರೆಯ ಬೀಜವು ಅಂಕುರಿಸು ವದು.ಚಿಂತಿಸಿದ ಫಲವು ದೊರೆಯದೆ ಹೋದರೆ ನಿರಾಶಾರೂಪ ದುಃಖವು ಆಗುವದು; ಯಾರಾದರೂ ಅಡ್ಡ ಬರುವುದರಿಂದ ನನಗೆ ಫಲವು ಪ್ರಾಪ್ತವಾಗದಿದ್ದರೆ ಆ ವ್ಯಕ್ತಿಯ ಬಗ್ಗೆ ದ್ವೇಷ ಕ್ರೋಧಾದಿಗಳು ಉದ್ಭವಿಸುವವು. ಆದರೆ ನಾನು ಕೇವಲ ಕರ್ತವ್ಯಬುದ್ಧಿಯಿಂದ ಕರ್ಮಮಾಡಿದರೆ ದುಃಖದ ಮೂಲ ಕಾರಣವನ್ನೆ ಕಿತ್ತಿ ಒಗೆದಂತಾಗುವದು. ಸುಖದುಃಖಗಳನ್ನು ತ್ಪನ್ನ ಮಾಡುವ ಸಾಮರ್ಥ್ಯವು ಕರ್ಮದಲ್ಲಿಲ್ಲ, ಆ ಕರ್ಮ ಫಲವನ್ನು ಕುರಿತು ನಮ್ಮ ಮನಸಿನಲ್ಲಿರುವ ಆಸಕ್ತಿಯಲ್ಲಿ ಅಥವಾ ಸಂಗದಲ್ಲಿ ಆ ಬಲವಿದೆ ಎಂಬುದು ಇದರ ಮೇಲಿಂದ ವ್ಯಕ್ತವಾಗುವದು. ಸುಖದುಃಖದ ಬೀಜವು ಕರ್ಮದಲ್ಲಿರದೆ,

ಕರ್ತನ ಬುದ್ಧಿಯಲ್ಲಿ ಕರ್ಮ ಮತ್ತು ಅದರ ಫಲ ಇವು ಗಳ ಬಗ್ಗೆ ಉತ್ಪನ್ನವಾಗುವ ಮಮತೆ, ಆಸಕ್ತಿ, ಇಚ್ಛೆ ಇವು ಗಳಲ್ಲಿ ಇದೆ. ಅಂದಬಳಿಕ ಕರ್ಮವನ್ನು ಬಿಡದೆ ಮನೋನಿಗ್ರಹ ದಿಂದ ಈ ಮಮತೆ ಮುಂತಾದವುಗಳನ್ನು ನಾವು ತಡೆಯು ಬಹುದು ಹಾಗೂ ಆನಂದಪೂರ್ವಕವಾಗಿ ಕರ್ಮವನ್ನು ಮಾಡುತ್ತ ಹೋಗಬಹುದು. ಇದೇ ಕಾರಣದ ಮೂಲಕ ಸತ್ಪು ರುಷನ ಉದಾಹರಣೆ ಕೊಡುವಾಗ ಕರ್ಮಶೂನ್ಯ ಸನ್ಯಾಸಿಯು ಉಲ್ಲೇಖಮಾಡದೆ ಗೀತೆಯು ಜನಕನಂಥ ನಿಷ್ಕಾಮ ಕರ್ಮ ಯೋಗಿಯ ಕಡೆಗೆ ಬೆರಳನ್ನು ತೋರಿಸಿದೆ. ಇಂದ್ರಿಯನಿಗ್ರಹ ಮತ್ತು ಮನೋನಿಗ್ರಹ ಇವುಗಳಲ್ಲಿ ಮನೋನಿಗ್ರಹವೆ ಹೆಚ್ಚಿ ನದು ಮತ್ತು ಮುಖ್ಯವು ಎಂಬುದು ನಿಃಸಂಶಯವು. ನಿರಾಹಾ ರಾದಿಗಳಿಂದ ಶರೀರವು ನಿರ್ಬಲವಾಗಿ ಇಂದ್ರಿಯಗಳು ನಿಶ್ಚೇ ಷ್ಟವಾದರೂ ಮನಸು ವಿಷಯವಾಸನೆಗಳಿಂದ ಮುಕ್ತವಾಗ ಲರಿಯದು. ಆದುದರಿಂದ ಪೂರ್ಣ ಮನೋನಿಗ್ರಹವು ಸಾಧಿ ಸುವ ವರೆಗೆ ಸ್ಥಿರಸುಖವು ಕೈಸೇರಲಾರದು. ಇಂದ್ರಿಯಗಳ ಯೋಗ್ಯ ವ್ಯವಹಾರವನ್ನು ಮನಃಸಂಯಮಪೂರ್ವಕ ನಡೆಸಿ ದರೆ ಇಂದ್ರಿಯಗಳನ್ನು ಜುಲುಮೆಯಿಂದ ಹತ್ತಿಕ್ಕುವ ಅಸ್ವಾಭಾವಿಕ ಯತ್ನವೂ ಅವಶ್ಯವಿಲ್ಲ. ಹೀಗೆ ಮಾಡಿದರೆ ಸಂಯ ಮವೂ ಅಸಹ್ಯವಾಗದೆ ಸಹಜ, ಸರಲ, ಮತ್ತು ಸುಖಕರ ವೆನಿಸುವದು. ಈ ಕಾರಣದಿಂದಲೆ ನಿಷ್ಕಾಮಬುದ್ಧಿಯಿಂದ ಕರ್ಮಮಾಡುವ ಉಪದೇಶವನ್ನು ಗೀತೆಯು ಮಾಡುವದು.

**೩.೫ ಕರ್ಮತ್ಯಾಗವು ಅನವಶ್ಯಕವು**

ಮೇಲೆ ಹೇಳಿದಂತೆ, ಸುಖಪ್ರಾಪ್ತಿ ಮತ್ತು ದುಃಖ

ನಿವೃತ್ತಿ ಇವುಗಳಿಗಾಗಿ ಕರ್ಮತ್ಯಾಗದ ಅವಶ್ಯಕತೆ ಇಲ್ಲ. ಯಾಕಂದರೆ ಕರ್ಮಮಾಡುತ್ತಿರುವಾಗಲೆ ಪರಮಸುಖದ ಪ್ರಾಪ್ತಿ ಮತ್ತು ಪರಮ ಸುಖಸ್ಥಿತಿ ಇವು ದೊರೆಯಬಲ್ಲವು. ಇಂದ್ರಿಯಸುಖವು ಎಂದಿಗೂ ಅಸ್ಥಿರವು, ಅದು ಬರುವದು ಮತ್ತು ಹೋಗುವದು; ಅದನ್ನು ನಾವು ಸ್ಥಿರಗೊಳಿಸ ಲಾರೆವು, ಅದರಲ್ಲಿ ನಾವು ಲೀನವಾದರೂ ಕೊನೆಗೆ ಅದು ಹಾರಿ ಹೋಗುವಂತಹದೇ. ಲಂಪಟಜೀವನದಲ್ಲಿ ಇಂಥ ಚಂಚಲ ಸುಖದ ಚಿತ್ರವು ಚನ್ನಾಗಿ ಕಾಣುವದು. ಇದಕ್ಕೂ ಬೇರೆ ತರದ ಸುಖವು ಒಂದು ಇರುವದು. ಅದಕ್ಕೆ ಸೂಕ್ಷ್ಮಮಾನಸಿಕ ಸುಖವೆನ್ನಬಹುದು. ಮನುಷ್ಯನು ಯಾವದೊಂದು ಉದಾತ್ತ ವಿಚಾರದಲ್ಲಿ ಮಗ್ನನಾದಾಗ ಸ್ಥೂಲ ಇಂದ್ರಿಯಜನ್ಯ ಸುಖ ಗಳೆಲ್ಲ ಮರೆತು ಹೋಗಿ, ಅಂತರದಲ್ಲಿ ಆನಂದ–ಉತ್ಸಾಹಗಳ ಉಕ್ಕು ಬರುವದು. ಇದರೊಡನೆ ಬಾಹ್ಯಜಗತ್ತಿನ ಸುಖವನ್ನು ಹೋಲಿಸಿದರೆ ಅದು ತುಚ್ಛವೆನಿಸುವದು. ಆತ್ಮಸುಖವು ಹೆಚ್ಚಿನದು. ಬುದ್ಧಿಯು ಏಕಾಗ್ರವಾಗುತ್ತ ಹೋದಂತೆ ಎಲ್ಲೆಲ್ಲಿಯೂ ಏಕ ಹಾಗೂ ಅವಿಭಕ್ತವಾದ ಆತ್ಮಭಾವವು ನೆಲೆಗೊಂಡಂತೆ ಎಲ್ಲಕ್ಕೂ ಶ್ರೇಷ್ಠ ಮತ್ತು ಅತುಲವಾದ ಅತೀಂದ್ರಿಯ ಆನಂದವು ಉಂಟಾಗುವದು. ಅದು ಎಲ್ಲರಿಗೂ ಪ್ರಾಪ್ತವಾಗಬಲ್ಲದು. ಅದು ಅಮರ್ಯಾದಿತವಿರುವದರಿಂದ ಎಲ್ಲರೂ ದೊರಕಿಸಲೆತ್ನಿಸಿದರೂ ಪೂರೈಸುವದು. ಅದು ಎರಡ ನೆಯ ವಸ್ತುವನ್ನವಲಂಬಿಸದೆ ಇರುವುದರಿಂದ ಸ್ವತಂತ್ರವಿರು ವದು. ಬಾಹ್ಯದೋಷಗಳಿಂದ ದೂಷಿತವಿರದಿರುವುದರಿಂದ ಅದು

ನಿರ್ಮಲವಿರುವದು. ಅವಿನಾಶಿಯಾದ ಆತ್ಮವನ್ನೆ ಅವಲಂಬಿಸಿರುವುದರಿಂದ ಅದು ಅವಿನಾಶಿಯಿರುವದು, ಅವ್ಯಯವಿರುವದು. ಬುದ್ಧಿಗ್ರಾಹ್ಯವಾದ ಆದರೆ ಅತೀಂದ್ರಿಯ ಸುಖವು ಈ ರೀತಿ ಅನುಪಮವು, ಶ್ರೇಷ್ಠವು, ಮತ್ತು ಸಾತ್ವಿಕವು. ಸ್ಥೂಲ ಇಂದ್ರಿಯ ಸುಖ ಮತ್ತು ಸುಂದರ ಕಲ್ಪನಾದಿಗಳಿಂದಾಗುವ ಸೂಕ್ಷ್ಮ ಮನಃಸುಖ ಇವೆರಡೂ ಈ ಅತೀಂದ್ರಿಯ ಸುಖದ ಸಾಟಿಗೆ ಬರಲಾರವು. ಈ ಸುಖಕ್ಕೆ ಶ್ರೇಯ, ಕಲ್ಯಾಣ, ಹಿತ, ಆನಂದ, ಶಾಂತಿ ಎಂದೂ ಇಂದ್ರಿಯಸುಖಕ್ಕೆ ಪ್ರೇಯ ಅಥವಾ ಸುಖ ಎಂದೂ ಅನ್ನುವ ಪರಿಪಾಠವಿರುವದು. ಈ ಬುದ್ಧಿಗ್ರಾಹ್ಯ ಅತೀಂದ್ರಿಯ ಸುಖಕ್ಕಿಂತ ಹೆಚ್ಚಿನ ಸುಖವು ಮನುಷ್ಯಮಾತ್ರರಿಗೆ ಸಿಕ್ಕುವದು ಅಸಂಭವವು. ಆದುದರಿಂದ ಇದೇ ಆತ್ಯಂತಿಕ ಸುಖವು, ಆತ್ಮಸುಖವು, ಅಥವಾ ಆಧ್ಯಾತ್ಮಿಕ ಸುಖವು ಎಂದು ಎನಿಸುವದು. ಈ ಬಗೆಯ 'ಅಂತಃಸುಖವು,' 'ಅಂತರಾರಾಮವು,' ಅದರ ಪ್ರಾಪ್ತಿಯು ಅಥವಾ ಸ್ಥಿತಿಯು ಕರ್ಮತ್ಯಾಗವನ್ನವಲಂಬಿಸಿಲ್ಲ. ಮನೋನಿಗ್ರಹ ಮೂಲಕ ಕರ್ಮಮಾಡುತ್ತಿರುವಾಗಲೆ ಬುದ್ಧಿಯು ಆತ್ಮನಿಷ್ಠವಾಗುವದು. ಆತ್ಮನಿಷ್ಠೆಯಿಂದಲೆ ಆತ್ಯಂತಿಕ ಸುಖವು ಅಳವಡುವದು. ತಾನು ಆಪ್ತಕಾಮನಾದರೂ ಆತ್ಮನಿಷ್ಠನ ಶೇಷ ಜೀವನವು ಸರ್ವಭೂತಹಿತವನ್ನು ಸಾಧಿಸುವದರಲ್ಲಿ ಕಳೆಯಲ್ಪಡುವದು. ಇಂಥ ಆಪ್ತಕಾಮ ಅವಸ್ಥೆಯಲ್ಲಿ ಆಜೀವನ ಲೋಕಸಂಗ್ರಹಾರ್ಥವಾಗಿ ಕರ್ಮಪರಾಯಣನಾಗಿರುವ ಪರಮ ದೃಷ್ಟಾಂತವು ಶ್ರೀಕೃಷ್ಣನದೇ ಇರುವದು.

## ೬ ವ್ಯಕ್ತಿ ಅಥವಾ ವ್ಯಷ್ಟಿ

### ೬.೧ ನೀತಿ ಶಾಸ್ತ್ರವು ಮತ್ತು ಬುದ್ಧಿಯು

ಯಾವದೊಂದು ಕರ್ಮವು ನೈತಿಕವೊ ಅಲ್ಲವೊ ಎಂಬುದು ಆಯಾ ಕರ್ಮದ ಬಾಹ್ಯ ಪರಿಣಾಮವನ್ನವಲಂಬಿಸಿರದೆ ಕರ್ತನ ಬುದ್ಧಿಯನ್ನವಲಂಬಿಸಿದೆ ಎಂದು ನಾಲ್ಕನೆಯ ಪ್ರಕರಣದಲ್ಲಿ ಹೇಳಿದೆ. ಸುಯೋಗ್ಯ ಸದ್ಬುದ್ಧಿಯಿಂದ ಮಾಡಿದ ಕರ್ಮವು ನೀತಿಕರವು, ನೈತಿಕವು; ಅಯೋಗ್ಯ ದುರ್ಬುದ್ಧಿಯಿಂದ ಮಾಡಿದ ಕರ್ಮವು ಅನೀತಿಕರವು, ಅನೈತಿಕವು. ನೀತಿಶಾಸ್ತ್ರದ ವಿಚಾರದಲ್ಲಿ ಬುದ್ಧಿಯ ಮಹತ್ವವು ಅತಿಶಯವಿರುವುದರಿಂದ ಬುದ್ಧಿ ಎಂದರೇನು, ಸುಯೋಗ್ಯ ಬುದ್ಧಿ ಸದ್ಬುದ್ಧಿ ಎಂದರೇನು, ಇದನ್ನು ಇನ್ನು ವಿಚಾರಿಸುವ.

### ೬.೨ ಹತ್ತು ಇಂದ್ರಿಯಗಳು

ಮನುಷ್ಯನಿಗೆ ತನ್ನ ಪಂಚ ಇಂದ್ರಿಯಗಳಿಂದ ಸೃಷ್ಟಿಯ ಜ್ಞಾನವಾಗುವದು. ಕಣ್ಣಿನಿಂದ ರೂಪ, ನಾಲಿಗೆಯಿಂದ ರಸ, ಮೂಗಿನಿಂದ ಗಂಧ, ಕಿವಿಯಿಂದ ಶಬ್ದ, ಮತ್ತು ಚರ್ಮದಿಂದ ಸ್ಪರ್ಶ ಇವು ತಿಳಿಯುವವು. ಇವು ಜ್ಞಾನಸಾಧನಗಳಾದುದರಿಂದ ಇವುಗಳಿಗೆ ಜ್ಞಾನೇಂದ್ರಿಯಗಳೆಂಬ ಹೆಸರು. ಕರ್ಮಸಾಧನವಾದ ಇನ್ನೈದು ಬೇರೆ ಇಂದ್ರಿಯಗಳೂ ಮನುಷ್ಯನಿಗಿರುವವು. ಕೈ, ಕಾಲು, ವಾಣಿ, ಗುದ ಮತ್ತು ಉಪಸ್ಥ ಇವುಗಳಿಂದ ಮನುಷ್ಯನು ಕರ್ಮಮಾಡುವುದರಿಂದ ಇವು ಕರ್ಮೇಂದ್ರಿಯಗಳೆನಿಸುವವು.

### ೩೮ ಮನಸು ಮತ್ತು ಇಂದ್ರಿಯಗಳು

ಜ್ಞಾನೇಂದ್ರಿಯಗಳ ಮುಖಾಂತರ ಜ್ಞಾನವಾಗುವದು ಎಂದರೂ ಕೇವಲ ಇಂದ್ರಿಯಗಳು ಜ್ಞಾನವನ್ನು ಮಾಡಿ ಕೊಡಲು ಸಮರ್ಥವಿಲ್ಲ. ಯಾಕಂದರೆ ಜ್ಞಾನವಾಗಲಿಕ್ಕೆ ಮನಸಿನ ಸಹಾಯವು ಅತ್ಯವಶ್ಯವು. ಘಡಿಯಾರದಲ್ಲಿ ಹನ್ನೆರಡು ಬಾರಿಸಲಾರಂಭಿಸಿತೆಂದರೆ ಒಂದೊಂದು ಗಂಟೆಯು ಧ್ವನಿಯು ಕಿವಿಗೆ ಕೇಳಿಸುವದು. ಆದರೆ ಆ ಗಂಟೆಗಳನ್ನೆಣಿಸಿ ಹನ್ನೆರಡು ಹೊಡೆಯಿತೆಂದು ತಿಳಿಸುವ ಕಾರ್ಯವನ್ನು ಕಿವಿಗಳು ಮಾಡದೆ ಮನಸು ಮಾಡುವದು. ಮನಸಿನೊಡನೆ ಎಲ್ಲ ಇಂದ್ರಿಯಗಳ ಸಂಬಂಧವೂ ಈ ರೀತಿ ಇರುವದು. ಒಂದು ಪಶುವಿಗೂ ಕಿವಿಗಳಿರುವವು,ಅದೂ ಗಂಟೆಗಳನ್ನು ಕೇಳುವದು, ಆದರೆ ಅದರ ಮನೋವಿಕಾಸವು ಆಗದೆ ಇದ್ದುದರಿಂದ ಹನ್ನೆರಡು ಬಾರಿಸಿತು, ಎಂಬ ಜ್ಞಾನವು ಅದಕ್ಕೆ ಆಗುವುದಿಲ್ಲ.ಒಬ್ಬ ಮನುಷ್ಯನ ಕಿವಿಗಳು ಗಂಟೆಗಳನ್ನು ಕೇಳುತ್ತಿದ್ದರೂ ಮನಸು ಅತ್ತ ಇಲ್ಲದೆ ಹೋದರೆ ಎಷ್ಟು ಹೊಡೆಯಿತು ಎಂಬ ಜ್ಞಾನವು ಆ ಮನುಷ್ಯನಿಗೆ ಆಗದು .ಆದುದರಿಂದ ಇಂದ್ರಿಯೇಭ್ಯಃ ಪರಂ ಮನಃ (೩. ೪೨) 'ಇಂದ್ರಿಯಗಳಿಗಿಂತ ಮನಸು ಶ್ರೇಷ್ಠವು,' ಎಂದು ಗೀತೆಯ ವಚನವಿರುವದು.

### ೩೯ ಮನಸು ಮತ್ತು ಬುದ್ಧಿಯು

ಇನ್ನು ಮನಸು ಮತ್ತು ಬುದ್ಧಿ ಇವುಗಳ ವಿಚಾರ ಮಾಡುವ.ಯಾವದೊಂದು ಕರ್ಮದ ನಿರ್ಣಯವನ್ನುಮಾಡುವ ಪೂರ್ವದಲ್ಲಿ ಅಂತಃಕರಣದಲ್ಲಿ ಎಷ್ಟೋ ಕ್ರಿಯೆಗಳು ಆಗುವದು

ತ್ಯವು. ಮೊದಲು ಇಂದ್ರಿಯಗಳು ಬಾಹ್ಯ ಪದಾರ್ಥಗಳ ಸಂಸ್ಕಾರಗಳನ್ನು ಒಳಗೆ ಒಯ್ಯುವವು; (ಸಾರಾಸಾರ ವಿಚಾರ ವಾಗಿ) ಅವುಗಳಲ್ಲಿ ಗ್ರಾಹ್ಯ ಯಾವವು ಅಗ್ರಾಹ್ಯ ಯಾವವು, ಇದರ ನಿರ್ಣಯವಾಗುವದು; ಬಳಿಕ ಆ ನಿರ್ಣಯಕ್ಕನುಸರಿಸಿ ಏನು ಮಾಡಬೇಕು ಏನು ಬಿಡಬೇಕು, ಇದರ ಬಗ್ಗೆ ಇಚ್ಛೆ ಅಥವಾ ಪ್ರವೃತ್ತಿಯಾಗುವದು, ತದನುಸಾರವೆ ಯಾವ ದೊಂದು ಕರ್ಮದ ನಿರ್ಣಯವಾಗುವದು. ಈ ಎಲ್ಲ ಮುಖ್ಯ ಕ್ರಿಯೆಗಳು ಎಷ್ಟೋ ಸಾರಿ ಒಂದು ಕ್ಷಣದಲ್ಲಿ ಆಗುವವು ಅಥವಾ ಅವುಗಳಿಗೆ ಕಾಲಾವಧಿಯು ಬೇಕಾಗುವದು. ಆದರೆ ಬುದ್ಧಿಪುರಸ್ಸರ ಮಾಡಿದ ಪ್ರತಿಯೊಂದು ಕರ್ಮನಿರ್ಣಯದಲ್ಲಿ ಇವು ಆಗೇ ತೀರುವವು. ಇಂದ್ರಿಯಸಂಸ್ಕಾರಗಳ ಆಕಲನ ಮಾಡಿ ಅವುಗಳನ್ನು ವ್ಯವಸ್ಥಿತವಾಗಿ ಮಂಡಿಸುವ ಕ್ರಿಯೆಯು ಮನಸಿನಿಂದ ಮಾಡಲ್ಪಡುವದು. ಅವುಗಳ ಸಾರಾಸಾರ ವಿಚಾರ ಮಾಡಿ ನಿರ್ಣಯಿಸುವ ಕ್ರಿಯೆಯು ಬುದ್ಧಿಯಿಂದ ಆಗುವದು. ಈ ಪ್ರಕಾರ ಕರ್ಮನಿರ್ಣಯವಾದ ಬಳಿಕ ಮನಸು ಆ ಕರ್ಮವನ್ನು ಇಂದ್ರಿಯಗಳ ಕೈಯಿಂದ ಮಾಡಿ ಸುವದು. ಇದನ್ನೆ ಬೇರೆ ರೀತಿಯಿಂದ ಹೇಳಬೇಕಾದರೆ, ನಿಶ್ಚಯ ಅಥವಾ ನಿರ್ಣಯ ಮಾಡುವದೆ ಬುದ್ಧಿಯ ಧರ್ಮವು; ಇಂದ್ರಿಯಸಂಸ್ಕಾರಗಳು ಹೀಗೆ ಇವೆ, ಹೀಗೆ ಇಲ್ಲ, ಎಂದು ಸಂಕಲ್ಪವಿಕಲ್ಪಾತ್ಮಕವಾಗಿ ಅವುಗಳನ್ನು ಬುದ್ಧಿಗೆ ತಿಳಿಸಿ ಬುದ್ಧಿಯ ನಿರ್ಣಯವನ್ನು ಕರ್ಮೇಂದ್ರಿಯಗಳ ಮುಖಾಂತರ ಅಮಲಿನಲ್ಲಿ ತರುವದೆ ಮನಸಿನ ಧರ್ಮವು. ಮನಸು

ಪ್ರವೃತ್ತಿಪ್ರೇರಕವಿರುವದರಿಂದ ವ್ಯಾಕರಣಾತ್ಮಕ – ವಿಸ್ತಾರ ಮಾಡುವ ಧರ್ಮವುಳ್ಳದ್ದು–ಎಂಬ ಹೆಸರನ್ನು ಪಡೆದಿರುವದು. ಮಹಾಭಾರತದ ಶಾಂತಿಪರ್ವದಲ್ಲಿ,ವ್ಯವಸಾಯಾತ್ಮಿಕಾಬುದ್ಧಿಃ ಮನೋ ವ್ಯಾಕರಣಾತ್ಮಕಮ್ (೨೫೧. ೧೧) 'ಬುದ್ಧಿಯು ನಿಶ್ಚಯ ಮಾಡುವ ಧರ್ಮವುಳ್ಳದ್ದು, ಮನಸು ವಿಸ್ತಾರ ಮಾಡುವ ಧರ್ಮವುಳ್ಳದ್ದು, ಎಂದು ಬುದ್ಧಿಮನಗಳ ಲಕ್ಷಣ ಗಳು ಹೇಳಲ್ಪಟ್ಟಿವೆ. ಗೀತೆಯಲ್ಲಿಯೂ ಬುದ್ಧಿಗೆ ವ್ಯವಸಾಯಾ ತ್ಮಿಕಾ ಎಂಬ ವಿಶೇಷಣವು ಹಚ್ಚಲ್ಪಟ್ಟಿದೆ. ಅಂತಃಕರಣದಲ್ಲಿ ಪ್ರೇಮ, ದ್ವೇಷ, ಕ್ರೋಧ, ದಯೆ, ಮಾಯೆ, ಕಾಮ, ಆನಂದ ಇತ್ಯಾದಿ ಅನೇಕ ಸುಷ್ಟ ದುಷ್ಟ ಭಾವನೆಗಳು ಉಂಟಾಗುವವು. ಅವು ಮನಸನ್ನೆ ಸಂಬಂಧಿಸಿರುವವು. ಅವು ಮನಸಿನಲ್ಲಿ ಉಂಟಾಗದಿದ್ದರೆ ಬುದ್ಧಿಯು ಉದಾಸೀನವೆ ಇರುವದು. ಕರುಣೆಯು ಹುಟ್ಟದಿದ್ದರೆ, ದಾನಮಾಡುವ ಪ್ರಶ್ನೆಯೆ ಉಂಟಾಗುವದಿಲ್ಲ. ಆದುದರಿಂದ ದಾನವನ್ನು ಯಾವ ರೀತಿ ಮಾಡಬೇಕು, ಎಂಬುದರ ನಿರ್ಣಯವೂ ಅನವ ಶ್ಯಕವಾಗುವದು. ಇದರ ಅರ್ಥವೇನಂದರೆ, ಬುದ್ಧಿಯು ಮನ ಸಿನ ಸಹಾಯವಿಲ್ಲದೆ ಇಂದ್ರಿಯಗಳನ್ನು ಕರ್ಮದಲ್ಲಿ ಪ್ರವರ್ತಿ ಸಲಾರದು, ಆದರೆ ಮನಸು ಮಾತ್ರ ಬುದ್ಧಿಯ ನಿರ್ಣಯ ಗಳನ್ನು ಬದಿಗೊತ್ತಿ ಅಥವಾ ಬುದ್ಧಿಯನ್ನು ಲೆಕ್ಕಿಸದೆ ಕರ್ಮ ಗಳನ್ನು ಕರ್ಮೇಂದ್ರಿಯಗಳಿಂದ ಮಾಡಿಸಬಲ್ಲದು. ಅತ್ಯಂತ ಕರುಣೆಯಿಂದ ವ್ಯಾಪ್ತನಾದಾಗ ಮನುಷ್ಯನು ಸಾರಾಸಾರ ಪಾತ್ರಾಪಾತ್ರ ವಿಚಾರ ಮಾಡದೆ ಒಮ್ಮೆಲೆ ದಾನ ಮಾಡಿ

ಬಿಟ್ಟರೆ, ಅವನು ಬುದ್ಧಿಯ ಸಹಾಯವಿಲ್ಲದೆ ಓ
ಯನ್ನು ಬದಿಗಿರಿಸಿ ಹಾಗೆ ಮಾಡಿದನು, ಎನ್ನಬೇಕು.
ಬುದ್ಧಿಯ ಅಂಕುಶವಿಲ್ಲದೆ ಸ್ವಪ್ರವೃತ್ತಿಯಿಂದಲೆ ಮ
ವರ್ತಿಸಲಾರಂಭಿಸಿದರೆ ಪುರುಷನು ಸ್ವೇಚ್ಛಾಚಾರಿಯಾ.
ಹಾದೀತಪ್ಪಿ ಸಿಕ್ಕಸಿಕ್ಕಲ್ಲಿ ತಿರುಗಿದಂತೆ ಆಗುವದು.ಆದುದರಿಂದ ಮನಸಸ್ತು ಪರಾಬುದ್ಧಿಃ (೩.೪೨)'ಮನಸಿಗಿಂತ ಬುದ್ಧಿಯು ಶ್ರೇಷ್ಠ, ಎಂದು ಗೀತೆಯು ಹೇಳುವದು. ಹೀಗೆ ಮನಸು ಮತ್ತು ಬುದ್ಧಿ ಇವುಗಳಲ್ಲಿ ಇಲ್ಲಿ ಭೇದವನ್ನು ತೋರಿಸಿದ್ದರೂ ಕಣ್ಣು ಮತ್ತು ಕಿವಿಗಳಂತೆ ಇವು ತೀರ ಬೇರೆ ಬೇರೆ ಇಲ್ಲ, ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಅವು ಒಂದೇ ಅಂತಃಕರಣದ ಎರಡು ಶಕ್ತಿಗಳು. ಯಾವ ಅಂತಃಕರಣವು ಸಂಕಲ್ಪ ವಿಕಲ್ಪಾತ್ಮಕ ವಿಚಾರ ಮಾಡುವುದೊ ಅದೇ ಅಂತಃಕರಣವು ನಿರ್ಣಯ ಮಾಡುವದು. ಆದರೆ ಒಂದೇ ಅಂತಃಕರಣಕ್ಕೆ ಅಧಿಕಾರಪರತ್ವದಿಂದ ಅಥವಾ ಭಿನ್ನ ಕಾರ್ಯಕಾರಿತ್ವದಿಂದ ಒಮ್ಮೆ ಮನಸು ಇನ್ನೊಮ್ಮೆ ಬುದ್ಧಿ ಎಂಬ ನಾಮಾಭಿಧಾನಗಳು ರೂಢವಾಗಿರುವವು.

### ೪೦ ಬುದ್ಧಿಯ ಎರಡು ಅರ್ಥಗಳು

ಈ ರೀತಿ ಬುದ್ಧಿ ಎಂಬ ಶಬ್ದವು ಸಾಮಾನ್ಯವಾಗಿ ಅಂತಃಕರಣದ 'ನಿಶ್ಚಯ ಮಾಡುವ' ಶಕ್ತಿಯನ್ನು ಸೂಚಿಸುವದು. ಆದರೆ ಎಷ್ಟೋ ಸಾರೆ ಇಚ್ಛೆ ಅಥವಾ ವಾಸನೆ, ಎಂಬ ಅರ್ಥದಿಂದಲೂ ಅದು ಉಪಯೋಗಿಸಲ್ಪಡುವದು. ಮನುಷ್ಯನಿಗೆ ಬುದ್ಧಿಯು-ನಿಶ್ಚಯಾತ್ಮಿಕಾ ಬುದ್ಧಿಯು-ಮಾಡಿದ ನಿರ್ಣಯದ

...ಯುವ ಇಚ್ಛೆಯಾಗುವದು; ಆ ಇಚ್ಛೆ ಅಥವಾ ...ಯೂ ಬುದ್ಧಿ ಎನಿಸುವದು. ಬುದ್ಧಿ ಶಬ್ದವು ಈ ...ಯೂ ಅರ್ಥದಿಂದ ಉಪಯೋಗಿಸಲ್ಪಟ್ಟದ್ದು ಗೀತೆಯಲ್ಲಿ ಕಂಡುಬರುವದು;

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।
ಬಹುಶಾಖಾಹ್ಯನಂತಾಶ್ಚ ಬುದ್ಧಯೋ ऽ ವ್ಯಯುಸಾಯಿ ನಾಮ್ ॥ (೨.೪೧) ಈ ಶ್ಲೋಕದ ಮೊದಲನೇ ಚರಣದಲ್ಲಿ 'ಬುದ್ಧಿ'ಯು ಅರ್ಥವು ನಿಶ್ಚಯಾತ್ಮಿಕಾ ಶಕ್ತಿ ಎಂದೂ ಎರಡನೇ ಚರಣದಲ್ಲಿ 'ಬುದ್ಧಿ'ಯು ಅರ್ಥವು ವಾಸನಾತ್ಮಿಕಾ ಎಂದೂ ಆಗುವದು. ಈ ಎರಡರಲ್ಲಿ ವ್ಯವಸಾಯಾತ್ಮಿಕಾ ಅಥವಾ ನಿಶ್ಚಯಾತ್ಮಿಕಾ ಬುದ್ಧಿಯು ಮಹತ್ವವು ವಿಶೇಷವಿರುವದು.ಯಾಕಂದರೆ ಅದು ವಾಸನೆಗಳ ಕಡಿವಾಣವಿರುವದು. ಕಾರಣದಂತೆ ಕಾರ್ಯ,ಎಂಬ ನಿಯಮವು ಅಬಾಧಿತವಿರುವದರಿಂದ ನಿಶ್ಚಯದಂತೆ ವಾಸನೆಗೆ ಮಾರ್ಗವು ತೋರುವದು ಮತ್ತು ವಾಸನೆಯಂತೆ ಕರ್ಮವಾಗುವದು. ನಿಶ್ಚಯಾತ್ಮಿಕಾ ಬುದ್ಧಿಯು ಸ್ಥಿರವೂ ಏಕಾಗ್ರವೂ ಇಲ್ಲದೆ ಹೋದರೆ, ಅನಂತ ಪ್ರಕಾರದ ಇಚ್ಛೆ-ವಾಸನೆಗಳು ಮನಸಿನಲ್ಲಿ ಉದ್ಭವಿಸುವವು ಮತ್ತು ಕಡಿವಾಣವಿಲ್ಲದ ಕುದುರೆಯು ಬೇಕಾದತ್ತ ಬೇಕಾದ ಹಾಗೆ ದಿಕ್ಕು ತಪ್ಪಿ ಓಡಾಡಿ ತಗ್ಗಿನಲ್ಲಿ ಬೀಳುವಂತೆ ಮನುಷ್ಯನು ಸ್ವೈರನಾಗಿ ವರ್ತಿಸಿ ಪಶ್ಚಾತ್ತಾಪಬಡುವ ಪ್ರಸಂಗವು ಬರುವದು.

**೪೧ ಮೂಬಗೆಯ ಬುದ್ಧಿಯು**

ಪೂರ್ವಕರ್ಮದ ಮೂಲಕ, ಪರಂಪರಾಗತ ಸಂಸ್ಕಾರ

ಗಳ ಮೂಲಕ, ಇಲ್ಲವೆ ಶಿಕ್ಷಣ ಮತ್ತು ಸತ್ಸಂಗತಿಯ ವಾತಾವ ರಣದ ಮೂಲಕ ನಿಶ್ಚಯಾತ್ಮಿಕಾ ಬುದ್ಧಿಯು ಸಾತ್ವಿಕ,ರಾಜ ಸಿಕ, ಅಥವಾ ತಾಮಸಿಕ ಹೀಗೆ ಮೂರು ಬಗೆಯದ್ದಿರ ಬಲ್ಲದು. ಆ ಮೂರು ಬಗೆಗಳಲ್ಲಿ ಸಾತ್ವಿಕ ಬುದ್ಧಿಯೆ ಎಲ್ಲಕ್ಕೂ ಶ್ರೇಷ್ಠವು. ವ್ಯಕ್ತಿ-ಸಮಷ್ಟಿಗಳಲ್ಲಿ, ಸಕಲ ಸೃಷ್ಟಿಯಲ್ಲಿ,ಸರ್ವ ಕಾಲದಲ್ಲಿ, ಗೋಚರ ಅಗೋಚರ ವಿಶ್ವದಲ್ಲಿ ಒಂದೇ ಒಂದು ಅಖಂಡ ಅವ್ಯಯ ಆತ್ಮನು ವ್ಯಾಪಿಸಿರುವನು, ಎಂಬ ಪ್ರತೀತಿ ಪೂರ್ವಕ ಯಾವ ಬುದ್ಧಿಯು ವರ್ತಿಸುವುದೊ ಅದು ಸಾತ್ವಿಕ ವೆಂದು ಗೀತೆಯ ಸಿದ್ಧಾಂತವಿರುವದು. ಅದೇ ಶುದ್ಧ ಮತ್ತು ನಿರ್ಮಲ ಬುದ್ಧಿಯು, ಅದೇ ಆತ್ಮಸ್ಥ ಮತ್ತು ಆತ್ಮನಿಷ್ಠ ಬುದ್ಧಿಯು.ಇಂಥ ಬುದ್ಧಿಯ ನಿರ್ಣಯಕ್ಕನುಸರಿಸಿ ಮಾಡಿದ ಕರ್ಮವು ನಿರ್ಮಲವು, ನೀತಿಮಯವು ಅಥವಾ ಧರ್ಮ ಮಯವೆಂದು ಹೇಳಬಹುದು. ಈ ಬಗ್ಗೆ ಹೆಚ್ಚಿನ ವಿಚಾರವು ಅಧ್ಯಾತ್ಮ ಪ್ರಕರಣದಲ್ಲಿ ಮಾಡಲ್ಪಡುವದು.

### ೪೨ ದೇಹ ಮತ್ತು ಕ್ಷೇತ್ರ

ಇನ್ನು ಸಾರಾಸಾರ ವಿಚಾರಗಳನ್ನು ನಿಶ್ಚಯಿಸುವ ಬುದ್ಧಿಶಕ್ತಿಯು ಯಾವ ದೇಹದಲ್ಲಿ ವ್ಯಕ್ತವಾಗುವುದೊ ಅದರ ರಚನೆಯನ್ನು ಸಂಕ್ಷೇಪದಲ್ಲಿ ವಿಚಾರಿಸುವ. ಮಾನವಶರೀರವು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಈ ಪಂಚಭೂತ ಗಳಿಂದ ಆಗಿರುವದು. ಅದರಲ್ಲಿ ಪಂಚ ಕರ್ಮೇಂದ್ರಿಯಗಳು ಪಂಚ ಜ್ಞಾನೇಂದ್ರಿಯಗಳು, ಸಂಕಲ್ಪವಿಕಲ್ಪಾತ್ಮಕಮನಸು, ಮತ್ತು ವ್ಯವಸಾಯಾತ್ಮಿಕಾ ಬುದ್ಧಿ ಇವು ಇರುವವು.ಯಾವು

ದರ ಮೂಲಕ ಪ್ರತಿಯೊಂದು ಚಲವಲಸವು ನಡೆದು ಶರೀರವು ಜೀವಂತವೆನಿಸುವದೊ ಅದು ಚೈತನ್ಯವು, ಅದರ ಹೊರತು ಮನಬುದ್ಧಿಗಳು ಏನೂ ಮಾಡಲಾರವು ಮತ್ತು ಶರೀರ ವ್ಯಾಪಾರಗಳು ಒಂದು ಕ್ಷಣ ಹೊತ್ತುಕೂಡ ನಡೆಯಲಾರವು. ಯಾವುದರಿಂದ ಸ್ವಪರಭೇದವು ಸತತ ಜಾಗ್ರತವಿರುವದೊ ಅದು ಅಹಂಕಾರವೆಂಬ ಹೆಸರು ಪಡೆದಿರುವದು. ಈ ಎಲ್ಲ ತತ್ವಗಳಿಗೆ ಆಧಾರವಿದ್ದುದೆ ಧೃತಿಯು, ಅದು ಇವೆಲ್ಲವುಗಳನ್ನು ಸ್ಥಿರವಾಗಿಡುವದು. ಈ ಬೇರೆ ಬೇರೆ ತತ್ವಗಳಿಂದ ರಚಿಸಲ್ಪಟ್ಟ ವ್ಯವಸ್ಥಿತ ಸಂಗ್ರಹಕ್ಕೆ ಸಂಘಾತವೆಂಬ ಹೆಸರು. ಈ ಪ್ರಕಾರ ಇರುವ ಮನುಷ್ಯ ದೇಹವು ಗೀತೆಯಲ್ಲಿ ಕ್ಷೇತ್ರವೆನಿಸುವದು.

### ೪೩ ಬುದ್ಧಿಗಿಂತ ಆಚೆಗೆ ಆತ್ಮವು

ಮನುಷ್ಯನು ಮಾಡುವ ಕ್ರಿಯಾಮಾತ್ರವು ಮನ, ಬುದ್ಧಿ, ಜ್ಞಾನೇಂದ್ರಿಯ, ಮತ್ತು ಕರ್ಮೇಂದ್ರಿಯ ಇವುಗಳಿಂದ ಆಗುವದು. ಆದರೆ ಇಷ್ಟರಿಂದ ಈ ವಿಷಯವು ಪೂರ್ಣವಾಗುವದಿಲ್ಲ, ಯಾಕಂದರೆ ಈ ಎಲ್ಲ ಇಂದ್ರಿಯಗಳು ವಿವಿಧವಾದ ತಮ್ಮ ತಮ್ಮ ಪ್ರತ್ಯೇಕ ಕರ್ಮವನ್ನು ಮಾತ್ರ ಮಾಡಬಲ್ಲವು. ಮನಸಿನಿಂದ ಬುದ್ಧಿಯ ಅಥವಾ ಕಣ್ಣಿನಿಂದ ಕಿವಿಯ ಕರ್ಮವು ಆಗದು. ಆದುದರಿಂದ ಬೇರೆ ಬೇರೆ ಇಂದ್ರಿಯಗಳ ಮುಖಾಂತರ ಆಗುವ ವಿವಿಧ ಜ್ಞಾನದ ಏಕೀಕರಣವು ಅಥವಾ ಸಮನ್ವಯವು ಕರ್ಮೇಂದ್ರಿಯಗಳಿಂದ ಇಲ್ಲವೆ ಜ್ಞಾನೇಂದ್ರಿಯಗಳಿಂದ, ಮನದಿಂದ ಇಲ್ಲವೆ ಬುದ್ಧಿಯಿಂದ, ಚೈತನ್ಯದಿಂದ ಇಲ್ಲವೆ ಅಹಂಕಾರದಿಂದ ಮಾಡಲ್ಪಡುವದು, ಎಂದು ಹೇಳ

ಲಿಕ್ಕಾಗದು. ಈ ಏಕೀಕರಣ ಮಾಡುವ, ಈ ಸಮನ್ವಯದ ಅನುಭವವನ್ನು ಪಡೆಯುವ ವಿಶೇಷ ತತ್ವವೊಂದಿರುವುದೆಂದೂ ಅದೇ ಆತ್ಮಾ ಅಥವಾ ಈ ಕ್ಷೇತ್ರದ ಜ್ಞಾನವನ್ನು ಹೊಂದುತ್ತಿರುವುದರಿಂದ ಕ್ಷೇತ್ರಜ್ಞ ಎಂಬ ಹೆಸರನ್ನು ಪಡೆದಿರುವದೆಂದೂ ಗೀತೆಯು ಹೇಳುವದು.

### ೪೪ ಸೃಷ್ಟಿವಿಚಾರವು ಅವಶ್ಯವು

ಮೇಲೆ ಹೇಳಿದ ಕ್ಷೇತ್ರ ಕ್ಷೇತ್ರಜ್ಞವಿಚಾರದಿಂದ ವ್ಯಕ್ತಿಯ ರಚನೆ ಮತ್ತು ಪ್ರವೃತ್ತಿ ಇವು ತಿಳಿಯುವವು. ಆದರೆ ವ್ಯಕ್ತಿ ಹಾಗೂ ಸಮಷ್ಟಿಯ ಮೂಲದಲ್ಲಿ ಯಾವ ತತ್ವವಿದೆ ಇದನ್ನು ತಿಳಿದುಕೊಳ್ಳದಿದ್ದರೆ ಜ್ಞಾನವು ಪೂರ್ಣವಾಗಲರಿಯದು. ಆದುದರಿಂದ ಇನ್ನು ಆ ವಿಚಾರವನ್ನು ಮಾಡುವ.

## ೭ ಸೃಷ್ಟಿ ಅಥವಾ ಸಮಷ್ಟಿ

### ೫೪ ಕ್ಷರ ಮತ್ತು ಅಕ್ಷರ

ಕ್ಷರಾಕ್ಷರದ-ಕ್ಷರ ಅಂದರೆ ಸತತ ಬದಲಾಗುತ್ತಿರುವ, ಅಕ್ಷರ ಅಂದರೆ ಬದಲಾಗದಿರುವ-ಸುಬದ್ಧ ವಿಚಾರ ಮಾಡುವ ಮೂರು ಶಾಸ್ತ್ರಗಳು-ಸಾಂಖ್ಯ,ನ್ಯಾಯ,ಮತ್ತು ವೇದಾಂತ-ನಮ್ಮಲ್ಲಿ ಪ್ರಸಿದ್ಧವಿರುವವು. ಈ ಮೂರರಲ್ಲಿ ವೇದಾಂತವೇ ಎಲ್ಲಕ್ಕೂ ಶ್ರೇಷ್ಠವಾದುದರಿಂದ ಸರ್ವಮಾನ್ಯವಾಗಿರುವದು ಮತ್ತು ಈಗ್ಯೂ ಅದು ಆರ್ಯಾವರ್ತದಲ್ಲಿ ಎಲ್ಲಕ್ಕೂ ವರ್ಚಸ್ಸುಳ್ಳದ್ದಿರುವದು. ನ್ಯಾಯಶಾಸ್ತ್ರದ ತಾತ್ವಿಕ ಸಿದ್ಧಾಂತಗಳ ಉಪಯೋಗವು ವೇದಾಂತದಲ್ಲಿ ಆಗದೆ ಇರುವುದರಿಂದ ಅದನ್ನು ಇಲ್ಲಿ ವಿವೇಚಿಸುವ ಕಾರಣವಿಲ್ಲ; ಆದರೆ ಸಾಂಖ್ಯದ ಮಾತು ಹಾಗಿಲ್ಲ. ಸಾಂಖ್ಯದ ಎಷ್ಟೋ ವಿಚಾರಗಳು ವೇದಾಂತ ವಿಚಾರಕ್ಕೆ ಸರಿ ಹೋಗುವವು ಮತ್ತು ಗೀತೆಯಲ್ಲಂತೂ ಸಾಂಖ್ಯಪರಿಭಾಷೆಯು ನಿಃಸಂಕೋಚವಾಗಿ ಉಪಯೋಗಿಸಲ್ಪಟ್ಟಿರುವದು. ಇಷ್ಟೇ ಅಲ್ಲ, ಕ್ಷರಾಕ್ಷರ ವಿಚಾರದಲ್ಲಿ ಸಾಂಖ್ಯಕ್ಕೂ ಗೀತೆಗೂ ಬಹಳೇ ಸಾಮ್ಯವಿರುವದು. ಆದುದರಿಂದ ಇಲ್ಲಿ ಸಾಂಖ್ಯ ತತ್ವಜ್ಞಾನವನ್ನು ಸ್ವಲ್ಪ ನೋಡುವದು ಅವಶ್ಯ.

### ೫೬ ಸಾಂಖ್ಯ ಎಂದರೇನು

ಕಪಿಲ ಮುನಿಯು ಉಪದೇಶಿಸಿದ ಶಾಸ್ತ್ರಕ್ಕೆಯೆ ಸಾಂಖ್ಯವೆಂಬ ಹೆಸರು ಬಂದಿದೆ. ಈ ಶಾಸ್ತ್ರದಲ್ಲಿ ಮೊದಲು

ವಿಶ್ವದ ಮೂಲಭೂತ ತತ್ವಗಳು ಎಣಿಸಲ್ಪಟ್ಟು ಅವು ಇಂತಿಷ್ಟೆ ಎಂದು ನಿರ್ಣಯಿಸಲ್ಪಟ್ಟದ್ದರಿಂದ ಇದಕ್ಕೆ 'ಸಾಂಖ್ಯ', ಎಣಿಸುವ ಶಾಸ್ತ್ರ, ಎಂಬ ಹೆಸರು ಬಂದಿತು. ಮುಂದೆ ಸಾಂಖ್ಯ ಅಂದರೆ ತತ್ವಜ್ಞಾನ, ಎಂಬ ಅರ್ಥವು ರೂಢವಾಯಿತು. ಈ ಅರ್ಥದಿಂದ ವೇದಾಂತವು ಕೂಡ ಒಮ್ಮೊಮ್ಮೆ ಸಾಂಖ್ಯವೆಂದು ನಿರ್ದೇಶಿಸಲ್ಪಡುತ್ತಿದೆ. ಆತ್ಮಾನಾತ್ಮವಿಚಾರದಲ್ಲಿ ಮಗ್ನರಾದವರೆಲ್ಲ ಸಾಂಖ್ಯಮಾರ್ಗಿಗಳೆಂದು ಎನಿಸಿಕೊಳ್ಳುವರು. ಗೀತೆಯಲ್ಲಿ ಸಾಂಖ್ಯಯೋಗ, ಸಾಂಖ್ಯನಿಷ್ಠೆ, ಎಂಬ ಪ್ರಯೋಗಗಳಿವೆ. ಅವು ಈ ಅರ್ಥದಿಂದಲೆ ಉಪಯೋಗಿಸಲ್ಪಟ್ಟಿವೆ ಎಂದು ತಿಳಿಯಬೇಕು.

### ೪೭ ಗುಣವಿಕಾಸವಾದವು

ಗುಣವಿಕಾಸವಾದ ಅಥವಾ ಪರಿಣಾಮವಾದ ಅಥವಾ ಸತ್ಕಾರ್ಯವಾದ, ಎಂಬುದು ಸಾಂಖ್ಯಶಾಸ್ತ್ರದ ಒಂದು ಮಹತ್ವದ ಸಿದ್ಧಾಂತವಿರುವದು: 'ಈ ಕಾರ್ಯರೂಪ ಜಗತ್ತಿನಲ್ಲಿ ಉತ್ಪನ್ನವಾದ ಪ್ರತಿಯೊಂದು ವಸ್ತುವು ಮೂಲಕಾರಣದಲ್ಲಿ ಸೂಕ್ಷ್ಮರೂಪದಿಂದ ಇದ್ದೇ ಇರುವದು. ಯಾವುದು ಮೊದಲಿನಿಂದ ಇಲ್ಲವೊ ಅದು ಮುಂದೆ ಎಂದಿಗೂ ಇರಲಾರದು, ಕಾರಣದಲ್ಲಿ ಇಲ್ಲದ್ದು ಕಾರ್ಯದಲ್ಲಿ ತೋರಲಾರದು. ಹಾಲಿನಿಂದ ಮೊಸರು ಆಗುವದು, ಆದರೆ ನೀರಿನಿಂದ ಅದು ಆಗದು. ಎಳ್ಳಿನಿಂದ ಎಣ್ಣೆ ಹೊರಡುವದು, ಆದರೆ ಮಳಲಿನಿಂದ ಮಾಣದು.' ಈ ವಿಚಾರವೆ ಗುಣವಿಕಾಸವಾದವೆನಿಸುವದು. ಸೃಷ್ಟಿಯಲ್ಲಿ ಹೊಸದೆಂಬುದೇನೂ ಹುಟ್ಟಲಾರದು,

ಕ್ಷಣಕ್ಷಣಕ್ಕೆ ಬದಲಾಗುವ ನಾನಾತ್ವವು ಕೇವಲ ಪರಿಣಾಮ ರೂಪವಿರುವದು; ಆದುದರಿಂದ ಅದು ಕ್ಷರವೆನಿಸುವದು. ಕಣ್ಣಿಗೆ ತೋರುವ ಈ ನಾನಾತ್ವದ ಬುಡದಲ್ಲಿ ಒಂದು ಅವ್ಯಕ್ತ ತತ್ವವಿರುವದು. ಅದಕ್ಕೆ ಪ್ರಕೃತಿ ಎಂಬ ಹೆಸರು. ಅದು ಎಂದೂ ನಾಶಹೊಂದದೆ ಇರುವುದರಿಂದ ಅಕ್ಷರವೆನಿಸುವದು.

### ೪೮ ತ್ರಿಗುಣಾತ್ಮಕ ಪ್ರಕೃತಿ ಮತ್ತು ಸೃಷ್ಟಿ

ಪ್ರಕೃತಿಯು ಮೂಲದಲ್ಲಿ ಒಂದೇ ಇದ್ದರೂ ಅದು ಸತ್ವ, ರಜ, ತಮ ಎಂಬ ಮೂರು ಗುಣಗಳುಳ್ಳದ್ದು. ಈ ಗುಣಗಳ ಬಲಾಬಲವು ಸಮವಿದ್ದಾಗ ಪ್ರಕೃತಿಯು ಸಾಮ್ಯಾವಸ್ಥೆಯಲ್ಲಿದ್ದು ಆಗ ನಾನಾತ್ವರಹಿತವಿರುವದು. ಯಾವುದೋ ಅಜ್ಞೇಯ ಕಾರಣದಿಂದ ಕ್ಷೋಭವುಂಟಾದೊಡನೆ ಪ್ರಕೃತಿಯ ಸಮತೆ ಕೆಟ್ಟು ಅದರಲ್ಲಿ ವಿಷಮತೆ ಉಂಟಾಗುವದು. ಆದರೂ ಈ ಮೂರು ಗುಣಗಳು ಕೂಡಿಯೆ ಇರುವವು. ಅವುಗಳ ಅತ್ಯಂತ ವಿಯೋಗವು ಎಂದಿಗೂ ಸಂಭವಿಸದು. ಅವುಗಳ ಮಿಶ್ರಣದ ಪ್ರಮಾಣವು ಮಾತ್ರ ಹೆಚ್ಚು ಕಡಿಮೆಯಾಗುವದು ಮತ್ತು ತದನುಸಾರ ಪದಾರ್ಥಗಳು ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ಪಡೆಯುವವು. ಮೂಲಪ್ರಕೃತಿಯು ಸಾಮ್ಯಾವಸ್ಥೆಯಲ್ಲಿರುವಾಗ ಅದು ಏಕರಸವಿರುವದು. ಅದರಲ್ಲಿ ಕ್ಷೋಭವುಂಟಾಯಿತೆಂದರೆ ವ್ಯವಸಾಯಾತ್ಮಕ ಬುದ್ಧಿರೂಪ ಗುಣವು ಮೊದಲು ಹುಟ್ಟುವದು. ಇದಕ್ಕೆ ಮಹತ್ ಎಂದೂ ಅನ್ನುವರು. ಬುದ್ಧಿಗುಣವು ಪ್ರಕಟವಾದರೂ ವಿವಿಧತೆಯು ಕಂಡು ಬರುವದಿಲ್ಲ. ಆದರೆ ಅಹಂಕಾರ ಗುಣದ ಆವಿರ್ಭಾವ

ವಾದೊಡನೆ ಪ್ರಕೃತಿಯ ಏಕರಸತೆಯು ಅಳಿದು ಅನೇಕತ್ವವು ತೋರ್ಪಟ್ಟು ಅಲ್ಲಿ ಪೃಥಃಕರಣ ಕ್ರಿಯೆಯು ಪ್ರಾರಂಭವಾಗು ವದು. ಬಳಿಕ ಸೃಷ್ಟಿಯಲ್ಲಿಯ ನಾನಾತ್ವವು ಎರಡು ರೀತಿ ವಿಸ್ತಾರ ಹೊಂದುವದು: ಸೇಂದ್ರಿಯ ಸೃಷ್ಟಿರೂಪದಿಂದ ಮತ್ತು ನಿರೀಂದ್ರಿಯ ಸೃಷ್ಟಿರೂಪದಿಂದ. ಮನುಷ್ಯ, ಪಶು, ಪಕ್ಷಿ, ವೃಕ್ಷಾದಿಗಳು ಸೇಂದ್ರಿಯ ಸೃಷ್ಟಿಯೆಂದು, ಇತರ ಜಡ ಪದಾರ್ಥಗಳು ನಿರೀಂದ್ರಿಯ ಸೃಷ್ಟಿಯೆಂದು ಎಣಿಸಲ್ಪಡುವವು. ಸೇಂದ್ರಿಯ ಸೃಷ್ಟಿಯಲ್ಲಿ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಮತ್ತು ಮನಸು ಹೀಗೆ ಹನ್ನೊಂದು ತತ್ವ ಗಳು ಸೂಕ್ಷ್ಮರೂಪದಿಂದ ಅಸ್ತಿತ್ವದಲ್ಲಿರುವವು. ನಿರೀಂ ದ್ರಿಯ ಸೃಷ್ಟಿಯಲ್ಲಿ ಪಂಚತನ್ಮಾತ್ರೆಗಳು ಮತ್ತು ಅದರಿಂದಾದ ಪಂಚಮಹಾಭೂತಗಳು ಹೀಗೆ ಹತ್ತು ತತ್ವಗಳು ಇರುವವು. ಈ ರೀತಿ ಮೂಲ ಪ್ರಕೃತಿ, ಬುದ್ಧಿ, ಅಹಂಕಾರ, ಸೇಂದ್ರಿಯ ಸೃಷ್ಟಿಯ ಹನ್ನೊಂದು ತತ್ವಗಳು, ಮತ್ತು ನಿರೀಂದ್ರಿಯ ಸೃಷ್ಟಿಯ ಹತ್ತು ತತ್ವಗಳು ಇವೆಲ್ಲ ಕೂಡಿ ಇಪ್ಪತ್ತುನಾಲ್ಕು ಆಗುವವು. ಇವುಗಳಲ್ಲದೆ ಪ್ರಕೃತಿಯಿಂದ ಭಿನ್ನ ಮತ್ತು ಸ್ವತಂತ್ರನಿರುವ ಪುರುಷ ಹೀಗೆ ಒಟ್ಟು ಇಪ್ಪತ್ತೈದು ತತ್ವ ಗಳಿಂದ ಸೃಷ್ಟಿಯು ನಿರ್ಮಾಣವಾಗಿರುವದು.

**೪೯ ಪ್ರಕೃತಿ ಮತ್ತು ಪುರುಷ**

ಮನುಷ್ಯನ ದೇಹ, ಮನ, ಬುದ್ಧಿ ಇವೆಲ್ಲ ಪ್ರಕೃತಿ ಯಿಂದ ಹುಟ್ಟಿದವುಗಳು;ಅದು ಜಡವಿರುವುದರಿಂದ ಚೈತನ್ಯವು ಮಾತ್ರ ಅದರಿಂದ ಹುಟ್ಟದು. ' ನಾನು ನೋಡುವ ಮತ್ತು

ಅರಿಯುವ ವಸ್ತು ಬೇರೆ, ನಾನು ಬೇರೆ,' ಎಂಬ ಅನುಭವವು ಎಲ್ಲರಿಗೂ ಬರುವದು. ಅಂದರೆ ಅರಿಯುವವ ಮತ್ತು ಅರಿತ ವಸ್ತು ಇವೆರಡು ಬೇರೆ ಬೇರೆ ಇರುವವು. ಪ್ರಕೃತಿಯನ್ನು ನೋಡುವವನು,ಅರಿಯುವವನು,ಅಥವಾ ದೃಷ್ಟನು ಪುರುಷ ಅಥವಾ 'ಜ್ಞ' ಎಂದೆನಿಸುವನು. ಸಾಂಖ್ಯದ ಪ್ರಕಾರ ಪುರುಷರು ಅನಂತರಿರುವರು. ಪುರುಷನು ಪ್ರಕೃತಿಯಿಂದ ತೀರ ಭಿನ್ನನು; ಅವನು ಚೇತನಸ್ವರೂಪನು, ಪ್ರಕೃತಿಯು ಜಡವು. ಅವನು ಉದಾಸೀನನು, ಪ್ರಕೃತಿಯು ಪ್ರವರ್ತಕವು; ಅವನು ನಿರ್ಗುಣನು, ಪ್ರಕೃತಿಯು ತ್ರಿಗುಣಾತ್ಮಕವು. ಸಾಂಖ್ಯ ಶಾಸ್ತ್ರದ ಈ ವಿಚಾರಗಳು ಮಾರ್ಪಟ್ಟು ಗೀತೆಯ ಹದಿಮೂರು ಮತ್ತು ಹದಿನಾಲ್ಕನೆಯ ಅಧ್ಯಾಯಗಳಲ್ಲಿ ಬಂದಿವೆ.

### ೫೦ ಸ್ಥೂಲ ಸೂಕ್ಷ್ಮ ದೇಹಗಳು ಮತ್ತು ಕೈವಲ್ಯ

ಪ್ರಕೃತಿ (ಒಂದು) ಮತ್ತು ಪುರುಷ (ಅಸಂಖ್ಯ) ಹೀಗೆ ಎರಡು ಸ್ವತಂತ್ರ ಮೂಲ ತತ್ವಗಳಿರುವವೆಂದು ಸಾಂಖ್ಯ ಸಿದ್ಧಾಂತವಿರುವದು. ನಿರ್ಗುಣ ಪುರುಷನು ಸ್ವತಃ ತಾನು ಏನೂ ಮಾಡಲಾರನು, ಮತ್ತು ಪುರುಷನ ಸಾನ್ನಿಧ್ಯವಿಲ್ಲದೆ ಪ್ರಕೃತಿಯು ಕರ್ಮಮಾಡಲು ಅಸಮರ್ಥವಿರುವದು; ಆದುದರಿಂದ ಈ ಎರಡರ ಸಂಯೋಗದಿಂದಲೆ ಸೃಷ್ಟಿಯು ಉತ್ಪನ್ನವಾಗುವದು. ಬಳಿಕ ಪುರುಷನು ತನ್ನ ನಿಜರೂಪವನ್ನು ಮರೆತು ಪ್ರಕೃತಿಯ ಗುಣಗಳನ್ನು ತನ್ನಲ್ಲಿ ಆರೋಪಿಸಿ ಸುಖ ದುಃಖಪರಂಪರೆಗೆ ಈಡಾಗುವನು. ಈ ಪರಿ ಸೃಷ್ಟಿಯಲ್ಲಿ ಪುರುಷನು ಮೋಹಪಡುವನು, ಪ್ರಕೃತಿಯ ಸಂಗದಿಂದ ನಿಜ

ರೂಪವನ್ನು ಮರೆತು ಜನ್ಮಮರಣ ಚಕ್ರದಲ್ಲಿ ಸಿಗುವನು. ಆದರೆ ಮೂಲದಲ್ಲಿ ಅಕರ್ತನಿರುವುದರಿಂದ ಅವನು ಪ್ರಕೃತಿಯ ಸಹಾಯವಿಲ್ಲದೆ ಜನ್ಮತಾಳಲಾರನು. ಆದುದರಿಂದ ಮರಣದ ಬಳಿಕ ಸಹ ಪುರುಷನಿಗೆ ಪ್ರಕೃತಿಯ ಸಂಬಂಧವು ಬಿಡುವುದಿಲ್ಲವೆಂದು ಅನುಮಾನ ಮಾಡಬೇಕಾಗುತ್ತದೆ. ಪಂಚಭೂತಾತ್ಮಕ ದೇಹವು ಇಲ್ಲಿಯೆ ಬಿದ್ದು ಹೋಗುವದು ಮತ್ತು ಮರಣ ಪಶ್ಚಾತ್ ಅದರೊಡನೆ ಪುರುಷನ ಸಂಬಂಧವು ಉಳಿಯದು. ಪರಂತು ಬುದ್ಧಿ, ಅಹಂಕಾರ, ಮನಸು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮತ್ತು ಅವುಗಳ ಆಶ್ರಯವಾದ ಪಂಚ ತನ್ಮಾತ್ರೆಗಳು ಹೀಗೆ ಹದಿನೆಂಟು ಸೂಕ್ಷ್ಮ ತತ್ವಗಳ ಸಂಘಾತವು ಮರಣದ ಸಮಯದಲ್ಲಿಯೂ ನಾಶವಾಗದೆ ಲಿಂಗದೇಹ ಅಥವಾ ಸೂಕ್ಷ್ಮದೇಹ ಎಂಬ ಹೆಸರಿನಿಂದ ಉಳಿಯುವದು. ಅದರ ಮುಖಾಂತರವೆ ಪುರುಷನು ಕರ್ಮಾನುಸಾರವಾಗಿ ಜನ್ಮಜನ್ಮಾಂತರಗಳನ್ನು ಪಡೆಯುವನು. ಸ್ವರೂಪದ ಅಜ್ಞಾನವು ಹಾಗೆಯೆ ಇರುವವರೆಗೆ ಈ ಲಿಂಗದೇಹವು ಪುರುಷನನ್ನು ಬಿಡುವುದಿಲ್ಲ, ಆದರೆ ಪೂರ್ಣಜ್ಞಾನೋದಯವಾದೊಡನೆ ವರ್ತಮಾನ ಶರೀರವು ಬಿದ್ದು ಹೋಗುವಾಗ ಲಿಂಗದೇಹವೂ ಲಯಹೊಂದಿ ಪುರುಷನು ಸ್ವಸ್ವರೂಪದಲ್ಲಿ ಸ್ಥಿತನಾಗುವನು.

### ೫೧ ಜನ್ಮಮರಣದ ಚಕ್ರವು

ಈ ರೀತಿ ನಿರ್ಮಾಣವಾದ ಅಥವಾ ಇದ್ದ ಸೃಷ್ಟಿಯು ಅಂದರೆ ಕರ್ಮವು ಮತ್ತು ಕರ್ಮಚಕ್ರವು ಅಖಂಡವಾಗಿ

ಅನಾದಿಕಾಲದಿಂದ ನಡೆದೇ ಇರುವದು. ಕರ್ಮಶಕ್ತಿಯು ನಾಶವು ಎಂದೂ ಆಗುವದಿಲ್ಲ, ಅದರ ನಾಮರೂಪಗಳು ಮಾತ್ರ ಪಲ್ಲಟಿಸುತ್ತವೆ ಮತ್ತು ಜೀವಗಳ ನಾಮರೂಪ ಪರಂಪರೆಗೆ ಜನ್ಮಮರಣದ ಚಕ್ರವೆಂಬ ಹೆಸರು ಇದೆ. ಮನುಷ್ಯನು ಜೀವದಿಂದಿರುವಾಗ ಮಾಡಿದ ಕರ್ಮವೆಲ್ಲ ಮರಣ ಸಮಯದಲ್ಲಿ ಲಿಂಗದೇಹದ ಆಧಾರದಿಂದ ಜೀವದೊಡನೆ ಹೋಗಿ ಆ ಜೀವಕ್ಕೆ ಹೊಸ ದೇಹಗಳನ್ನು ಕೊಡಲಿಕ್ಕೆ ಕಾರಣವಾಗುವದು. ಆ ಕರ್ಮಗಳು ಒಂದೇ ತರಹದವು ಇರದಿರುವದರಿಂದ ಜೀವನು ಅವುಗಳ ಉಪಯೋಗವನ್ನು ಏಕಕಾಲಕ್ಕೆ ಕೊಳ್ಳಲಾರನು. ಉಪಭೋಗದ ದೃಷ್ಟಿಯಿಂದ ಕರ್ಮದಲ್ಲಿ ಮೂರು ವರ್ಗಗಳನ್ನು ಕಲ್ಪಿಸಬಹುದು. ಕೂಡಿಬಿದ್ದ ಕರ್ಮ ಸಮುಚ್ಚಯಕ್ಕೆ ಸಂಚಿತ ಕರ್ಮ ಎನ್ನುವರು. ಅದರೊಳಗಿನ ಯಾವ ಕರ್ಮವನ್ನು ಭೋಗಿಸುವದಕ್ಕಾಗಿ ಈ ದೇಹವು ಧರಿಸಲ್ಪಟ್ಟಿರುವದೊ ಅದು ಆರಬ್ಧ ಕರ್ಮವು ಮತ್ತು ಉಳಿದುದೆಲ್ಲ ಅನಾರಬ್ಧ ಕರ್ಮವೆನಿಸುವದು.ಆರಬ್ಧಕರ್ಮದ ಕ್ಷಯವು ಉಪಭೋಗದಿಂದಲೆ ಆಗಬಲ್ಲದು? ಆದರೆ ಆತ್ಮಜ್ಞಾನವಾಯಿತೆಂದರೆ ಅನಾರಬ್ಧ ಕರ್ಮವು ನಷ್ಟವಾಗಿ ಹೋಗುವದು. ಹೀಗೆ ಈ ಎರಡು ಕರ್ಮಗಳಲ್ಲಿಯ ಭೇದವಿರುವದು.

### ೩೨ ಕರ್ಮವಿಪಾಕ

ಕರ್ಮ ಮತ್ತು ಅದರ ಫಲ ಇವುಗಳ ಸಂಬಂಧವು ಕಾರ್ಯಕಾರಣದಷ್ಟೆ ನಿಕಟವು. ಒಮ್ಮೆ ಒಂದು ಕರ್ಮವಾಯಿತೆಂದರೆ ಅದರ ಭೋಗವು ಆಗಿಯೆ ತಿರಬೇಕು. ಇದಕ್ಕೆ

ಕರ್ಮವಿಪಾಕ ಅಥವಾ ಭೋಗ ಎಂದೆನ್ನುವರು. ಯಾವ ಕರ್ಮದ ಭೋಗಕ್ಕಾಗಿ ಈ ದೇಹವು ಪ್ರಾಪ್ತವಾಗಿದೆಯೊ ಅದನ್ನು ಭೋಗಿಸದೆ ಬಿಡುಗಡೆ ಇಲ್ಲ. ಮನುಷ್ಯನ ಅಂತರ ದಲ್ಲಿ ಆರಬ್ಧಕರ್ಮಜನಿತ ಪ್ರೇರಣೆಯು ಯಾವಾಗಲೂ ಇದ್ದೇ ಇರುವದು. ಅದರಿಂದುಂಟಾದ ಫಲಭೋಗವು ಒಂದು ಕರ್ಮವೇ ಇರುವದು. ಅದರಲ್ಲಿ ಮನುಷ್ಯನು ಮಮತ್ವ ವನ್ನಿಟ್ಟರೆ ಆ ಮಮತ್ವದ ಮೂಲಕ ಆ ಫಲಭೋಗವು ಸಹ ಹೊಸ ಕರ್ಮವೆನಿಸುವದು ಮತ್ತು ಈ ರೀತಿ ಹೊಸ ಕರ್ಮ ಗಳ ಸಂಚಯುವಾಗುವದು. ಇದಕ್ಕೆ ಪ್ರತಿಯಾಗಿ ಮೋಕ್ಷದ ಆಕಾಂಕ್ಷೆಯೂ ಮನುಷ್ಯನಲ್ಲಿ ಸ್ವಾಭಾವಿಕವಿರುವದು ಮತ್ತು ಅದು ಆತ್ಮನಿಂದ ಉದ್ಭವಿಸುವದು. ಆತ್ಮನು ಬ್ರಹ್ಮ ರೂಪನಿದ್ದರೂ ಮಾಯೆಯ ಮೂಲಕ ಅವನು ಕರ್ತನಂತೆ ತೋರುವನು. ಅವನಲ್ಲಿ ಮೋಕ್ಷದ ಪ್ರೇರಣೆಯು ಜಾಗ್ರತ ವಾಗುವದು. ಹೀಗೆ ಮನುಷ್ಯನಲ್ಲಿ ಕರ್ಮಪ್ರೇರಣೆ ಮತ್ತು ಆತ್ಮಪ್ರೇರಣೆ ಇವೆರಡೂ ತೋರುವವು. ಕರ್ಮಪ್ರೇರಣೆಯ ಪ್ರಾಬಲ್ಯವಿರುವವರೆಗೆ ಕರ್ಮಬಂಧವು ಬಿಡದು ಮತ್ತು ಜನ್ಮ ಜನ್ಮಾಂತರವು ತಪ್ಪದು. ಆದರೆ ಆತ್ಮಪ್ರೇರಣೆಯು ಬಲ ಗೊಂಡಂತೆ ಕರ್ಮದ ಕಟ್ಟು ಸಡಿಲಾಗಿ ಕೊನೆಗೆ ಪೂರ್ಣ ಬಿಡು ಗಡೆಯಾಗುವದು. ಆತ್ಮಪ್ರೇರಣೆಯಿಂದಲೆ ಮನುಷ್ಯನು ತನ್ನ ಕರ್ಮದ ಮೇಲೆ ಅಧಿಕಾರ ನಡೆಸಿ ಸ್ವಾಮಿತ್ವವನ್ನು ಪಡೆಯ ಬಲ್ಲನು.ಈ ಬಗೆಯ ಆತ್ಮಸ್ವಾತಂತ್ರ್ಯವು ಮನುಷ್ಯನಿಗೆ ಇಲ್ಲೇ ಇಲ್ಲ ಎಂದು ಯಾರಾದರೂ ಅಂದರೆ ಸಾರಾಸಾರವಿಚಾರ,

ನೀತಿ ಅನೀತಿಗಳ ವಿವೇಕ, ಧರ್ಮಾಧರ್ಮಬುದ್ಧಿ, ಇವು ಗಳನ್ನು ಮಾಡುವ ಸಾಮರ್ಥ್ಯವೆ ಮನುಷ್ಯನಲ್ಲಿಲ್ಲ, ಅವನು ಉದಾತ್ತ ಪ್ರಯತ್ನಮಾಡುವ ಕಾರಣವೆ ಇಲ್ಲ, ಕರ್ಮವು ಎಳೆದತ್ತ ಕಟ್ಟಿಗೆಯ ತುಂಡಿನಂತೆ ಅವನು ಹೋಗಬೇಕು; ಎಂದು ಪ್ರತಿಪಾದಿಸಿದಂತಾಗುವದು.ಅನುಭವಕ್ಕೆ ಈ ಮಾತು ಸಲ್ಲದು. ಉದ್ಧರೇದಾತ್ಮನಾತ್ಮಾನಮ್ (೬-೫) ಎಂದು ಗೀತೆಯು ಸ್ವೋದ್ಧಾರದ ವಿಷಯದಲ್ಲಿ ಕೊಟ್ಟ ಸ್ವಾವಲಂಬ ನದ ಉಪದೇಶವು ನಿರರ್ಥಕವಿರಲಾರದು, ಆತ್ಮವು ಪರತಂತ್ರ ವಿರಲರಿಯದು. ಸಾಧನವಿಷಯದಲ್ಲಿಯೂ ಗೀತೆ ಮತ್ತು ಸಾಂಖ್ಯಮತ ಇವುಗಳಲ್ಲಿ ಭೇದವಿದೆ. ಮೋಕ್ಷಪ್ರಾಪ್ತಿಗೆ ಕರ್ಮಸನ್ಯಾಸವು ಅವಶ್ಯವು ಎಂಬ ಸಾಂಖ್ಯಮತವನ್ನು ಗೀತೆಯು ವಿರೋಧಿಸುವದು.

### ೫೩. ಸಾಂಖ್ಯವಿಚಾರ ಮತ್ತು ಗೀತೆ

ಸಾಂಖ್ಯಶಾಸ್ತ್ರ ಮತ್ತು ಗೀತೆ ಇವುಗಳ ತತ್ವಜ್ಞಾನದಲ್ಲಿ ಸಾಮ್ಯವಿದ್ದಂತೆ ಮಹತ್ವದ ಭೇದವಾದರೂ ಇರುವದು. ಪುರುಷನು ನಿರ್ಗುಣನು, ಉದಾಸೀನನು, ಅಕರ್ತನು, ಸಾಕ್ಷಿಯು ಎಂಬ ಸಾಂಖ್ಯಮತವು ಗೀತೆಗೆ ಸಮ್ಮತವು, ಆದರೆ ಪುರುಷರು ಅಸಂಖ್ಯರಿರುವರೆಂಬ ಸಾಂಖ್ಯರ ಸಿದ್ಧಾಂ ತವು ಗೀತೆಗೆ ಮಾನ್ಯವಿಲ್ಲ. ಗೀತೆಯು ತ್ರಿಗುಣಾತ್ಮಕ ಪ್ರಕೃ ತಿಗೆ ಸ್ವತಂತ್ರವೆನ್ನದೆ ಅವ್ಯಕ್ತ ಬ್ರಹ್ಮತತ್ವವು ಪುರುಷ ಮತ್ತು ಪ್ರಕೃತಿಗಿಂತ ಶ್ರೇಷ್ಠವು, ಅದೇ ಅಕ್ಷರವು 'ಕ್ಷರಾಕ್ಷರ' ಸೃಷ್ಟಿಯ ಮೂಲವು, ಎಂದು ಹೇಳುವದು. ಪರಬ್ರಹ್ಮನಿಂದಲೆ

ಹೊರಹೊಮ್ಮುವ 'ಜೀವಸೃಷ್ಟಿ' ಮತ್ತು 'ಮಾಯಾಸೃಷ್ಟಿ' ಇವು ಬ್ರಹ್ಮನ ಪರಾ ಮತ್ತು ಅಪರಾ ಪ್ರಕೃತಿ ಎಂದೆನಿಸುವವು. ಜೀವವೆ (ಸಾಂಖ್ಯರ ಪುರುಷನು) ಪರಾಪಕೃತಿಯು ಹಾಗೂ ಬುದ್ಧಿ, ಅಹಂಕಾರ, ಮನಸು, ಮತ್ತು ತನ್ಮಾತ್ರೆಗಳು ಇವು ಎಂಟು ಕೂಡಿ ಅಪರಾ ಪ್ರಕೃತಿಯು. ಇವುಗಳ ಮುಂಖಾಂತರ ವ್ಯಕ್ತಸೃಷ್ಟಿಯು ನಿರ್ಮಾಣವಾಗುವದು ಎಂದು ವೇದಾಂತದ ಮತವಿರುವದು.

ಈ ಪರಿಯ ಸೃಷ್ಟಿಯಲ್ಲಿ ಪುರುಷನು ಮೋಹಪಡುವನು, ಪ್ರಕೃತಿಯ ಸಂಗದಿಂದ ನಿಜರೂಪವನ್ನು ಮರೆತು ಜನ್ಮಮರಣ ಚಕ್ರದಲ್ಲಿ ಸಿಗುವನು. ಆದರೆ ಮೂಲದಲ್ಲಿ ಅಕರ್ತನಿರುವದ ರಿಂದ ಅವನು ಪ್ರಕೃತಿಯ ಸಹಾಯವಿಲ್ಲದೆ ಜನ್ಮತಾಳ ಲಾರನು. ಆದುದರಿಂದ ಮರಣದ ಬಳಿಕ ಸಹ ಪುರುಷನಿಗೆ ಪ್ರಕೃತಿಯ ಸಂಭಂಧವು ಬಿಡುವುದಿಲ್ಲವೆಂದು ಅನುಮಾನ ಮಾಡಬೇಕಾಗುತ್ತಿದೆ. ಪಂಚಮಹಾಭೂತಾತ್ಮಕ ದೇಹವು ಇಲ್ಲಿಯೆ ಬಿದ್ದುಹೋಗುವದು ಮತ್ತು ಮರಣಪಶ್ಚಾತ್ ಅದರೊಡನೆ ಪುರುಷನ ಸಂಬಂಧವು ಉಳಿಯದು. ಆದರೆ ಬುದ್ಧಿ, ಅಹಂಕಾರ, ಮನಸು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮತ್ತು ಅವುಗಳ ಆಶ್ರಯವಾದ ಪಂಚ ತನ್ಮಾತ್ರೆಗಳು ಹೀಗೆ ಹದಿನೆಂಟು ಸೂಕ್ಷ್ಮತತ್ವಗಳ ಸಂಘಾ ತವು ಮರಣಸಮಯದಲ್ಲಿಯೂ ನಾಶವಾಗದೆ ಲಿಂಗದೇಹ ಅಥವಾ ಸೂಕ್ಷ್ಮದೇಹ ಎಂಬ ಹೆಸರಿನಿಂದ ಇರುವದು. ಅದರ ಮುಖಾಂತರವೇ ಪುರುಷನು ಕರ್ಮಾನುಸಾರವಾಗಿ

ಜನ್ಮಜನ್ಮಾಂತರಗಳನ್ನು ಪಡೆಯುವನು. ಸ್ವರೂಪದ ಅಜ್ಞಾನವು ಹಾಗೆಯೆ ಇರುವವರೆಗೆ ಈ ಲಿಂಗದೇಹವು ಪುರುಷನನ್ನು ಬಿಡುವದಿಲ್ಲ. ಆದರೆ ಪೂರ್ಣ ಜ್ಞಾನೋದಯವಾದೊಡನೆ ವರ್ತಮಾನ ಶರೀರವು ಬಿದ್ದುಹೋಗುವಾಗ ಲಿಂಗದೇಹವೂ ಲಯಹೊಂದಿ ಪುರುಷನು ಸ್ವರೂಪದಲ್ಲಿ ಸ್ಥಿತನಾಗುವನು.

### ೫೪ ಸಾಂಖ್ಯ ಮತ್ತು ವೇದಾಂತ ಇವುಗಳ ತುಲನೆ

ಕರ್ಮಬಂಧವೆ ಜನ್ಮಮರಣಚಕ್ರದ ಮೂಲಕಾರಣವಿರುವದರಿಂದ ಆ ಗಂಟು ಒಡೆಯದ ಹೊರತು ಮೋಕ್ಷದ ಆಶೆ ಇಲ್ಲ. ದೇಹವಿರುವವರೆಗೆ ಕರ್ಮನಾಶವು ಶಕ್ಯವಿಲ್ಲ. ಕರ್ಮಬಂಧನವನ್ನು ಕಳೆಯಲು ಕರ್ಮನಾಶವು ಅವಶ್ಯಕವೂ ಇಲ್ಲ. ಕರ್ಮದ ಬಂಧಕತ್ವವು ಕರ್ಮದಲ್ಲಿರದೆ ಕರ್ತನ ಆಸಕ್ತಬುದ್ಧಿಯಲ್ಲಿದೆ, ಎಂಬುದನ್ನು ಈ ಮೊದಲೇ ನೋಡಿದ್ದೇವೆ. ಕರ್ತನ ಬುದ್ಧಿಯಲ್ಲಿ ಮಮತ್ವದ ಅಭಾವವಿದ್ದರೆ, ಕರ್ಮಫಲದ ಬಗ್ಗೆ ಅನಾಸಕ್ತಿಯಿದ್ದರೆ,ಅರ್ಥಾತ್ ಕರ್ತನು ಸಾಮ್ಯಬುದ್ಧಿಯುಳ್ಳವನಿದ್ದರೆ, ಮಂತ್ರಮುಗ್ಧ ಸರ್ಪದಂತೆ ಕರ್ಮವು ಬಾಧಕ ಅಥವಾ ಬಂಧಕವಾಗಲರಿಯದು. ಆದುದರಿಂದಲೆ ಗೀತೆಯು ಪುನಃ ಪುನಃ ಅನಾಸಕ್ತಿ, ಫಲತ್ಯಾಗ, ಸಾಮ್ಯ, ಆತ್ಮೌಪಮ್ಯ ಈ ತತ್ವಗಳ ಉಪದೇಶವನ್ನು ಮಾಡಿರುವದು. ಆರಭತೇ ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ(೩-೭) 'ಫಲಾಸಕ್ತಿಯಿಲ್ಲದೆ ಕರ್ಮೇಂದ್ರಿಯಗಳನ್ನು ಕರ್ಮಯೋಗದಲ್ಲಿ ಪ್ರವರ್ತಿಸುವನು;' ತ್ಯಕ್ತ್ವಾ ಕರ್ಮಫಲಾಸಂಗಮ್

(೪-೨೦) 'ಕರ್ಮಫಲದ ಆಸಕ್ತಿಯನ್ನು ಬಿಟ್ಟು;' ಸರ್ವ ಭೂತಾತ್ಮ ಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ(೬-೭)'ಸರ್ವ ಭೂತಗಳಲ್ಲಿ ಆತ್ಮನನ್ನೆ ಗುರುತಿಸುವವನು ಕರ್ಮಮಾಡಿ ದರೂ ಬದ್ಧನಾಗುವದಿಲ್ಲ' ಸರ್ವಕರ್ಮಫಲತ್ಯಾಗಂ ಕುರು (೧೨-೨೧) 'ಎಲ್ಲ ಕರ್ಮಗಳ ಫಲಗಳನ್ನು ಬಿಟ್ಟುಬಿಡು;' ಈ ಗೀತಾವಚನಗಳು, ಕರ್ಮವನ್ನು ಬಿಡದೆ ಕರ್ಮಫಲವನ್ನು ಕುರಿತು ಇರುವ ಮಮತ್ವ ಅಥವಾ ಆಸಕ್ತಿಯನ್ನು ಬಿಟ್ಟು ಕರ್ಮಮಾಡಬೇಕು, ಅಂದರೆ ಕರ್ಮವು ಬಂಧಕವಾಗದೆ ಮುಕ್ತಿದಾಯಕವಾಗುವದು, ಎಂಬುದನ್ನೆ ಕಂಠೋಕ್ತವಾಗಿ ಹೇಳುವವು. ಕರ್ಮವು ಒಂದು ಕ್ಷಣಹೊತ್ತು ಸಹ ತಡೆಯು ವದಿಲ್ಲ, ಕರ್ಮಮಾಡದೆ ಇರುವದು ಅಸಾಧ್ಯವು, ಅದರ ತ್ಯಾಗದ ಹಟವು ಮಿಥ್ಯೆಯು, ವ್ಯರ್ಥವು ಹಾಗೂ ಕರ್ಮವು ದೊಡ್ಡದೊಡ್ಡವರನ್ನು ತನ್ನವಶಕ್ಕೆ ತರುವಷ್ಟು ಬಲವುಳ್ಳದ್ದಿರು ವದು. ಕರ್ಮತ್ಯಾಗವು ಕರ್ಮಪ್ರವಾಹವನ್ನು ತಡೆಯುವ ಯೋಗ್ಯ ಉಪಾಯವಲ್ಲ. ಬಾಹ್ಯತಃ ಕರ್ಮವನ್ನು ಬಿಟ್ಟು ಕುಳಿತರೂ ಮನಸ್ಸಿನಲ್ಲಿ ನಡೆದ ನಿತ್ಯ ವಿಚಾರಕರ್ಮವನ್ನು ಒಂದುಕ್ಷಣ ಸಹ ನಿಲ್ಲಿಸುವದು ದುರ್ಧರವು. ಗುಡ್ಡದ ಗರ್ಭದಲ್ಲಿ ಹುಟ್ಟಿ ಬಂಡೆಯಿಂದ ಬಂಡೆಗೆ ಹಾರುವ ವೇಗವುಳ್ಳ ನದಿಗೆ ಒಡ್ಡುಗಟ್ಟಿ ಅದನ್ನು ದಾಟುವ ಪ್ರಯತ್ನ ಮಾಡುವು ದಕ್ಕಿಂತ ಅದರ ಪ್ರವಾಹಕ್ಕೆ ಮಾರ್ಗಕೊಡುವಂತೆ ಸೇತು ಕಟ್ಟಿ ಅದರಾಚೆಗೆ ಹೋಗುವದು ಸುಗಮವು,ಸಯುಕ್ತಿಕವು. ಅದೇ ರೀತಿ ಅಪ್ರತಿಹತವಾದ ಕರ್ಮಪ್ರವಾಹವನ್ನು ತ್ಯಾಗ

ದಿಂದ ತಡೆಯುವ ಹಂಬಲವನ್ನು ಹಿಡಿಯದೆ ಅದಕ್ಕೆ ಸ್ವಕರ್ಮಾಚರಣೆಯೆಂಬ ಮಾರ್ಗವನ್ನು ಕೊಟ್ಟು ಅನಾಸಕ್ತಿಯ ಸೇತುವನ್ನು ಕಟ್ಟಿದರೆ ಮನುಷ್ಯನು ಸುಸೂತ್ರವಾಗಿ ಆಚೆಯ ದಂಡೆಗೆ ಸಾಗಿ ಶಾಂತಿ-ಸುಖಗಳನ್ನು ಪಡೆಯುವನು. ಇನ್ನು ಕರ್ಮವನ್ನು ಬಿಟ್ಟು ಬಿಡಬೇಕೆಂದು ಒದ್ದಾಡಿದರೂ ಎಷ್ಟೋ ಬಿಡಲಾರದ ಕರ್ಮಗಳಿವೆ. ಎಲ್ಲ ಕರ್ಮಗಳನ್ನು ಬಿಟ್ಟರೂ ಜೀವನಕರ್ಮವನ್ನು ಬಿಡುವ ಬಗೆ ಹೇಗೆ ? ಜೀವವನ್ನೆ ಸಾಯುಗೊಲ್ಲಬೇಕೆಂದರೆ ಆತ್ಮಹತ್ಯೆಯೆಂಬ ಹೊಸಕರ್ಮವು ಹುಟ್ಟಿ ಅದರ ಫಲವನ್ನು ಭೋಗಿಸುವ ಪ್ರಸಂಗವು ಬರುವದು ! ಇದನ್ನೆಲ್ಲ ವಿಚಾರಿಸಿದರೆ, ಬುದ್ಧಿಯು ಸಮಾವಸ್ಥೆಯನ್ನು ಪಡೆಯುವನಕ ಕರ್ಮಕ್ಷಯವಾಗ ಲರಿಯದು ಎಂಬುದು ಸಿದ್ಧವು. ಆದುದರಿಂದ ಕರ್ಮತ್ಯಾಗದಂಥ ತವಡು ಕುಟ್ಟುವ ಕೆಲಸದಲ್ಲಿ ವೇಳೆಯನ್ನು ಹಾಳು ಮಾಡದೆ ಬುದ್ಧಿಯಲ್ಲಿ ಸಮತೆ ಮತ್ತು ಆತ್ಮೌಪಮ್ಯತೆಗಳನ್ನು ಅಳವಡಿಸಲು ಯತ್ನಿಸಿದರೆ ಕರ್ಮದ ಬಂಧಕತ್ವವು ಅಳಿದು ಹೋಗುವದು. ಪ್ರಾಚೀನ ಕಾಲದಲ್ಲಿ ಯಜ್ಞಯಾಗಾದಿಗಳಲ್ಲಿ ತೊಡಗಿರುವ ಕರ್ಮಮಾರ್ಗವೆ ಶ್ರೇಷ್ಠವು ಎಂದೆನಿಸುತ್ತಿತ್ತು; ಅದಕ್ಕೆ ಪ್ರತಿಯಾಗಿ, ಎಲ್ಲ ವೇದೋಕ್ತ ಹಾಗೂ ವ್ಯವಹಾರಿಕ ಕರ್ಮಗಳು ಗೌಣವೆಂದು ಅವುಗಳ ತ್ಯಾಗವನ್ನು ಪ್ರತಿಪಾದಿಸುವ ಜ್ಞಾನಮಾರ್ಗವು ಮುಂದೆ ಮಹತ್ವವನ್ನು ಪಡೆಯಿತು. ಆದರೆ ಈ ಎರಡೂ ಮಾರ್ಗಗಳು ಮನುಷ್ಯನ ನಿಜಸ್ವಭಾವವನ್ನು ಸ್ವಲ್ಪ ಅವಗಣಿಸುವವು,ಅವು

ಏಕಾಂಗೀನವಿರುವವು, ಅವು ಸರ್ವಾಂಗೀನ ಹಿತವನ್ನು ಅವು ಸಾಧಿಸವು. ಶ್ರೌತಸ್ಮಾರ್ತಾದಿ ಮತ್ತು ಬೇರೆ ಕರ್ಮಗಳನ್ನು ಫಲಾಶೆ ಇಟ್ಟು ಮಾಡುವದು ಹೇಗೆ ಅಹಿತಕರವೊ ಹಾಗೆಯೆ ಕರ್ಮಸರ್ವಸ್ವವನ್ನು ತ್ಯಜಿಸಿ ಅರಣ್ಯದಲ್ಲಿ ಧ್ಯಾನಮಗ್ನರಾಗಿ ಕೂಡುವದು ಪೂರ್ಣ ಹಿತಕರವಲ್ಲ. ಗೀತೆಯು ಈ ಎರಡೂ ಮಾರ್ಗಗಳ ಸುಂದರ ಸಮನ್ವಯವನ್ನು ಮಾಡುವದು; ಫಲ ದಲ್ಲಿ ಅನಾಸಕ್ತಿ ಮತ್ತು ಸ್ವಕರ್ಮದಲ್ಲಿ ಆಸಕ್ತಿ ಇವುಗಳನ್ನು ಸಲೆಸಂದಿಸಿ ಕರ್ಮಯೋಗವೆಂಬ ದಿವ್ಯಮಾರ್ಗವನ್ನು ತೋರಿ ಸುವದೇ ಗೀತೆಯ ಉದ್ದೇಶವು. ಈ ಮಾರ್ಗದಿಂದ ಸಾಗಿದರೆ ನಮ್ಮ ಜೀವನ ಶಕ್ತಿಗಳೆಲ್ಲ ಪೂರ್ಣ ಉಪಯುಕ್ತ ಮತ್ತು ಫಲಕಾರಿಯಾಗಿ ನಾವು ಪರಮಶಾಂತಿಯನ್ನು ಪಡೆಯುವೆವು.

## ೮ ಅಧ್ಯಾತ್ಮ ವಿಚಾರವು

### ೫೫ ಅಧ್ಯಾತ್ಮದೃಷ್ಟಿಯು ಹೆಚ್ಚಿನದು

ಅಧ್ಯಾತ್ಮಜ್ಞಾನ ಮತ್ತು ಅಧ್ಯಾತ್ಮದೃಷ್ಟಿ ಇವೇ ಆಧಿಭೌತಿಕಾದಿ ಬೇರೆ ದೃಷ್ಟಿಗಳಿಗಿಂತ ಶ್ರೇಷ್ಠವಾದವುಗಳು ಎಂದು ಗೀತೆಯ ಸಿದ್ಧಾಂತವಿರುವುದರಿಂದ ಗೀತೆಯೂ ಆ ಅಧ್ಯಾತ್ಮದ ಆಧಾರದಿಂದಲೆ ಕರ್ಮಯೋಗವನ್ನು ಪ್ರತಿಪಾದಿಸುವದು. ಈ ಸಮಗ್ರಸೃಷ್ಟಿಯಲ್ಲಿ ಮತ್ತು ವಿಭಕ್ತವೆಂದು ತೋರುವ ಅನೇಕಾನೇಕ ವ್ಯಕ್ತಿಗಳಲ್ಲಿ ಒಂದೇ ಒಂದು ಬ್ರಹ್ಮತತ್ವವು ವ್ಯಾಪ್ತವು, ಎಂಬ ಅನುಭವವಾಯಿತೆಂದರೆ ಮನುಷ್ಯನಲ್ಲಿಯ ಸ್ವಪರಭಾವವು ನಷ್ಟವಾಗುವದು. ಅವನು ಆತ್ಮೌಪಮ್ಯ ಬುದ್ಧಿಯಿಂದ ಆಚರಿಸುವನು. ಮತ್ತು ಅಂಥವನ ಬುದ್ಧಿಯಿಂದಲೆ ಶ್ರೇಷ್ಠಪ್ರಕಾರದ ನೀತಿಧರ್ಮವು ಉಗಮಹೊಂದುವದು. ಬುದ್ಧಿಯ ಈ ಆತ್ಮೌಪಮ್ಯತೆಯು ಯಥಾರ್ಥ ಜ್ಞಾನವಾಗಬೇಕಾದರೆ ಅಧ್ಯಾತ್ಮದ ವಿವೇಚನೆಯು ಅವಶ್ಯವಿರುವದರಿಂದ ಅದನ್ನು ಇಲ್ಲಿ ಮಾಡುವ.

### ೫೬ ಜ್ಞಾನದ ಮೂರು ಪ್ರಮಾಣಗಳು.

ನಮಗೆ ಆದ ಜ್ಞಾನವು ಸತ್ಯವು ಎಂದು ಸಿದ್ಧಪಡಿಸಲಿಕ್ಕೆ ಹಲವು ಸಾಧನಗಳಿರುವವು. ಆ ಸಾಧನಗಳಿಗೆ ಪ್ರಮಾಣಗಳೆಂಬ ಹೆಸರು. ಅವು ಪ್ರತ್ಯಕ್ಷ, ಅನುಮಾನ, ಮತ್ತು ಆಪ್ತವಾಕ್ಯ ಎಂದು ಮೂರು ಇರುವವು. ಮನುಷ್ಯನು ಇಂದ್ರಿಯ

ದ್ವಾರದಿಂದ ಸೃಷ್ಟಿಯ ಜ್ಞಾನವನ್ನು ದೊರಕಿಸುವನು, ಇದು ಪ್ರತ್ಯಕ್ಷಪ್ರಮಾಣವು; ಯಾಕಂದರೆ ಈ ಜ್ಞಾನದ ಸತ್ಯತೆಗೆ ಅವನು ಪಡೆದ ಅನುಭವವೆ ಸಾಕ್ಷಿಯು. ಪಂಚೇಂದ್ರಿಯ ಗಳಿಂದಾದ ಜ್ಞಾನದ ಸಹಾಯದಿಂದ ಮನುಷ್ಯನ ಮನಬುದ್ಧಿ ಗಳು ಆಯಾ ವಿಷಯದ ಚರ್ಚೆಮಾಡಿ ತರ್ಕದಿಂದ ನಿಶ್ಚಯಿಸಿದ ಜ್ಞಾನವು ಅನುಮಾನವೆನಿಸುವದು. ಪ್ರತ್ಯಕ್ಷ ಮತ್ತು ಅನುಮಾನ ಎಂಬ ಈ ಎರಡು ಬಗೆಯ ಜ್ಞಾನಪ್ರಮಾಣಗಳು ಎಲ್ಲರಿಗೂ ಪರಿಚಿತವಿರುವವು ಮತ್ತು ತಿಳಿದುಕೊಳ್ಳಲಿಕ್ಕೆ ಸುಗಮವಿರುವವು. ಪಂಚಮಹಾಭೂತಗಳಿಂದಾದ ವಿವಿಧ ಪದಾರ್ಥಗಳು ಪಂಚೇಂದ್ರಿಯಗಳ ವಿಷಯಗಳಿರುವವು. ಆದರೆ ಇಷ್ಟರಿಂದ ಸೃಷ್ಟಿಯು ಮುಗಿಯುವದಿಲ್ಲ. ವ್ಯಕ್ತಾ ವ್ಯಕ್ತಸೃಷ್ಟಿಯ ಅಂತರದಲ್ಲಿ ವ್ಯಾಪ್ತನಿರುವ ಅವ್ಯಕ್ತ 'ಆತ್ಮನು ಇಂದ್ರಿಯಗಳಿಗೆ ಗೋಚರನಿರದಿದ್ದರೂ ಸಾಮ್ಯಬುದ್ಧಿಯಿಂದ ಅವನ ಅಸ್ತಿತ್ವದ ಅನುಭವವಾಗುವದು. ಇಂಥ ಇಂದ್ರಿ ಯಾತೀತ ಅನುಭವವೆ ಅವ್ಯಕ್ತ ತತ್ವಗಳ ಪ್ರಮಾಣವು. ಈ ವಿಷಯದಲ್ಲಿ ಉದಾತ್ತ ಮಹಾನುಭಾವಿಗಳಾದ ಋಷಿ ವರ್ಯರ ಅನುಭವವು ಪ್ರಮಾಣಭೂತವೆಂದು ತಿಳಿಯುವದು ಯೋಗ್ಯವು ಮತ್ತು ನ್ಯಾಯಶುದ್ಧವು. ಅಂಥವರು ಪಡೆದ ಪರಮತತ್ವದ ಪ್ರತೀತಿಯು ಉಪನಿಷತ್ತುಗಳಲ್ಲಿ ಉಕ್ತವಾಗಿ ರುವದು. ಆ ಉಕ್ತಿಗಳು ಆಪ್ತವಚನವೆಂದೆನಿಸುವವು ಮತ್ತು ಪ್ರತ್ಯಕ್ಷ ಹಾಗೂ ಅನುಮಾನದಷ್ಟೇ ಅವು ಪ್ರಮಾಣವಿರು ವವು. ಆ ಪ್ರಮಾಣಗಳ ಸತ್ಯತೆಯನ್ನು ಈಗ್ಯೂ ಪ್ರಯತ್ನ

ಶೀಲರು ಅನುಭವಿಸುವದು ಶಕ್ಯವಿರುವದರಿಂದ ಆ ಪ್ರಮಾಣ
ಗಳ ಬೆಲೆಯು ಮಿಕ್ಕವುಗಳಿಗಿಂತ ಎಳ್ಳಷ್ಟೂ ಕಡಿಮೆಯಿಲ್ಲ
ವೆಂದು ಹೇಳಬಹುದು.

### ೫೭ ಪರಮಾತ್ಮನು

ಪುರುಷ ಮತ್ತು ಪ್ರಕೃತಿ ಈ ಎರಡು ತತ್ವಗಳ
ಸಂಯೋಗದಿಂದ ಈ ವಿಶ್ವದ ವಿಸ್ತಾರವಾಗಿರುವದು, ಎಂದು
ಸಾಂಖ್ಯರ ಮತವು. ಆದರೆ ಈ ವಿಚಾರವು ಪೂರ್ಣವಿಲ್ಲವೆಂದು
ಗೀತೆಯ ಅಭಿಪ್ರಾಯವಿರುವದು. ಪುರುಷರು ನಿರ್ಗುಣರಿದ್ದರೂ
ಅಸಂಖ್ಯರಿರುವರು, ಎಂದು ಸಾಂಖ್ಯವು ಅನ್ನುವದು. ಹೀಗೆ
ಪುರುಷರು ಬೇರೆ ಬೇರೆ ಇರುವ ಗುಣವುಳ್ಳವರಿದ್ದರೆ ಅಲ್ಲಿ ಅಹಂ
ಕಾರವು ಸಂಭವಿಸಿ ಪುರುಷನ ನಿರ್ಗುಣತ್ವವು ಅಳಿದು ಹೋಗು
ವದು; ಅದೇ ರೀತಿ, ಪುರುಷ ಮತ್ತು ಪ್ರಕೃತಿ ಇವು ಸ್ವತಂತ್ರ
ವೆಂದು ತಿಳಿದರೆ ಅವುಗಳ ನಡುವೆ ಸಂಬಂಧವಿಲ್ಲದಾಗಿ ಪ್ರಕೃ
ತಿಯು ಪುರುಷನಿಗಾಗಿ ಏಕೆ ಪ್ರವೃತ್ತವಾಗಬೇಕು, ಎಂಬ
ಪ್ರಶ್ನೆಯು ಉತ್ತರವಿಲ್ಲದೆ ಉಳಿಯುವದು ಆದುದರಿಂದ ಈ
ವಿಚಾರಸರಣಿಯು ವೇದಾಂತಕ್ಕೆ ಸಮ್ಮತವಿಲ್ಲ. ಸೃಷ್ಟಿ
ಯಲ್ಲಿಯ ನಾನಾತ್ವದ ಏಕೀಕರಣ ಮಾಡಮಾಡುತ್ತ
ಪ್ರಕೃತಿಯವರೆಗೆ ಬಂದ ಬಳಿಕ ಆ ಕ್ರಮವನ್ನು ಅಲ್ಲಿಯೆ
ನಿಲ್ಲಿಸದೆ, ಸೃಷ್ಟಿಯಲ್ಲಿ ಅಂತರ್ಭೂತವಾದ ಆತ್ಮವೆಂಬ
ಅದ್ವಿತೀಯ ಅವ್ಯಕ್ತ ತತ್ವದ ಅಸ್ತಿತ್ವವನ್ನು ಒಪ್ಪುವದು
ಯೋಗ್ಯವೆಂದು ವೇದಾಂತದ ಮತವಿರುವದು. ಪುರುಷರು
ಅಸಂಖ್ಯರಿರುವರೆಂಬುದನ್ನು ವೇದಾಂತವು ಮನ್ನಿಸುವದಿಲ್ಲ,

ಯಾಕಂದರೆ ನಿರ್ಗುಣ ವಸ್ತುವೆಂಬುದು ಅನೇಕವಿರಲಾರದು ಮತ್ತು ಅನೇಕವಿದ್ದುದು ಸರ್ವವ್ಯಾಪಿ ಇರಲಾರದು. ಆದುದರಿಂದ ಪುರುಷರು ಅಸಂಖ್ಯ ಕಂಡರೂ ಕೊನೆಗೆ ಒಬ್ಬನೇ ಪರಮಾತ್ಮನು ಇರುವನೆಂದು ಸಿದ್ಧಾಂತ ಮಾಡ ಬೇಕಾಗುತ್ತದೆ. ಪ್ರಕೃತಿಯು ತ್ರಿಗುಣಾತ್ಮಕವು, ಗುಣಾ ತ್ಮಕವಿದ್ದುದೆಲ್ಲ ನಾಮರೂಪಾತ್ಮಕವು, ನಾಮರೂಪಾ ತ್ಮಕವಿದ್ದುದೆಲ್ಲ ವಿನಾಶಿಯು, ಆದುದರಿಂದ ಪ್ರಕೃತಿಯು ನಶ್ವರವೆಂದೇ ಕೊನೆಗೆ ಒಪ್ಪಬೇಕಾಗುತ್ತಿದೆ. ಇದನ್ನೆಲ್ಲ ವಿಚಾರಿಸಿ ಆತ್ಮವೆಂಬ ಒಂದೇ ತತ್ವವು ನಿತ್ಯ ಉಳಿಯುವದು, ಎಂದು ವೇದಾಂತವು ಕಟ್ಟಕಡೆಯ ಪ್ರಮೇಯವನ್ನು ಕಟ್ಟಿರು ವದು. ಗೀತೆಯ ಅಭಿಪ್ರಾಯವೂ ಇದೇ ಇರುವದು.

### ೫೮ ಸಗುಣ ಮತ್ತು ನಿರ್ಗುಣ ಬ್ರಹ್ಮನು

ಪರಬ್ರಹ್ಮನು ಅದ್ವಿತೀಯನೂ ನಿರ್ಗುಣನೂ ಇರುವು ದರಿಂದ ಅವನು ಮನುಷ್ಯ ಬುದ್ಧಿಗೆ ಅಗಮ್ಯನು;ಹೀಗೆ ಅವನು ಅಗಮ್ಯನೇ ಉಳಿದರೆ ಅವನ ಮಹಾತ್ಮ್ಯವು ಮನುಷ್ಯನಿಗೆ ತಿಳಿಯದು ಮತ್ತು ಅವನನ್ನು ಸಾಕ್ಷಾತ್ಕರಿಸುವ ಇಚ್ಛೆಯೂ ಹುಟ್ಟದು. ಆದುದರಿಂದ ವ್ಯಕ್ತ ಮತ್ತು ಸಗುಣನೆಂದು ಅವನ ವರ್ಣನೆಮಾಡಿ ಅವನ ಬಗ್ಗೆ ಜಿಜ್ಞಾಸೆ ಉತ್ಪನ್ನ ಮಾಡುವ ಯತ್ನವು ವೇದಾಂತದಲ್ಲಿ ಮಾಡಲ್ಪಟ್ಟಿರುವದು. 'ಅವ್ಯಕ್ತ ನಿದ್ದರೂ ಮೂಢರು ನಾನು ವ್ಯಕ್ತನೆಂದು ತಿಳಿಯುವರು ಮತ್ತು ನನ್ನ ಎಲ್ಲಕ್ಕೂ ಶ್ರೇಷ್ಠವಾದ ರೂಪವನ್ನು ಅರಿಯದೆ ಹೋಗುವರು' (೭.೨೪) ಎಂದು ಗೀತೆಯು ಅವ್ಯಕ್ತ ಬ್ರಹ್ಮನ

ಶ್ರೇಷ್ಠತೆಯು ಹೊಗಳುವದು. ಆದರೆ ಗೀತೆಯು ಸಾಧನವೆಂದು ಭಕ್ತಿಗೆ ಹೆಚ್ಚು ಮಹತ್ವ ಕೊಟ್ಟದ್ದರಿಂದ ಮತ್ತು ನಿರ್ಗುಣವು ಭಕ್ತಿವಿಷಯವಾಗದೆ ಇರುವುದರಿಂದ ಅಲ್ಲಿ ಬ್ರಹ್ಮನ ಸಗುಣ ಹಾಗೂ ವ್ಯಕ್ತರೂಪದ ವರ್ಣನೆಯೆ ವಿಶೇಷವಾಗಿ ಬಂದಿರುವದು. ಸಗುಣ ಬ್ರಹ್ಮನಿಗೆ ಈಶ್ವರನೆಂಬ ಸಂಜ್ಞೆಯು; ಅವನು ಸೃಷ್ಟಿಯನ್ನು ನಿರ್ಮಿಸುವವನು, ಎಲ್ಲರ ಪ್ರಭುವು, ಯಜ್ಞಫಲಗಳನ್ನು ಭೋಗಿಸುವವನು, ಎಂದು ಗೀತೆಯಲ್ಲಿ ಅವನ ವರ್ಣನೆಯಿರುವದು.ಅದೇ ಪ್ರಕಾರ ಈಶ್ವರನು ಮಾಡುವವನಲ್ಲ ಮಾಡಿಸುವವನಲ್ಲ, ಗುಣಕರ್ಮಗಳು ಅವನಿಗೆ ಸ್ಪರ್ಶ ಮಾಡಲಾರವು, ಎಂಬ ನಕಾರಾತ್ಮಕ ವರ್ಣನೆಗಳೂ ಅದರಲ್ಲಿ ಇರುವವು.ಇದಲ್ಲದೆ,ಭೂತಗಳ ಆಧಾರನಿದ್ದರೂ ಅವನು ಭೂತಗಳಲ್ಲಿಲ್ಲ,ಅವನು ಸತ್ ಅಲ್ಲ ಅಸತ್ ಅಲ್ಲ,ಅವನಲ್ಲಿ ಸೇಂದ್ರಿಯ ಸೃಷ್ಟಿ ಇದ್ದರೂ ಅವನು ನಿರೀಂದ್ರಿಯನು, ನಿರ್ಗುಣನಿದ್ದರೂ ಗುಣಭೋಗಿಯು, ಏಕಕಾಲಕ್ಕೆ ದೂರ ಮತ್ತು ಸಮೀಪ ಇರುವವನು,ಅವಿಭಕ್ತನಿದ್ದರೂ ಅವನು ವಿಭಕ್ತನಂತೆ ತೋರುವನು, ಈ ಪ್ರಕಾರದ ಅವನ ಸಗುಣ–ನಿರ್ಗುಣ ವರ್ಣನೆಯೂ ಗೀತೆಯಲ್ಲಿ ಬಂದಿದೆ. ಉಪನಿಷತ್ತುಗಳಲ್ಲಿಯೂ ಬ್ರಹ್ಮನ ಸಗುಣ ಮತ್ತು ನಿರ್ಗುಣ ಸ್ವರೂಪಗಳು ಬಣ್ಣಿಸಲ್ಪಟ್ಟಿವೆ. ಹೀಗಿದ್ದರೂ ಯಾವುದನ್ನು ಇದೇ ಎಂದು ಬೆರಳಿನಿಂದ ತೋರಬಹುದೊ ಅದು ಅಂತಿಮ ಸತ್ಯವಲ್ಲ, ಯಾವುದನ್ನು ಮನವಾಣಿಗಳಿಂದ ಬಣ್ಣಿಸಬಹುದೊ ಅದು ಪರಬ್ರಹ್ಮವಲ್ಲ, ಎಂಬುದೇ ವೇದಾಂತದ ಚರಮ ಸಿದ್ಧಾಂತವು. ನೇತಿ, ನೇತಿ

ಮತ್ತು ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ, ಅಂದರೆ ಕಾಣುವುದಾವುದೂ ಬ್ರಹ್ಮವಲ್ಲ ಮತ್ತು ವಾಣಿ ಮನಗಳಿಗೆ ಅದು ಅಗೋಚರವು ಎಂದು ಉಪನಿಷತ್ತುಗಳು ಸ್ಪಷ್ಟವಾಗಿ ಉಸುರುವವು. ನಿರ್ಗುಣ, ನಿರ್ವಿಕಾರ, ಅವ್ಯಕ್ತ, ಅಚಿಂತ್ಯ ಬ್ರಹ್ಮವೆ ಎಲ್ಲಕ್ಕೂ ಶ್ರೇಷ್ಠವು ಮತ್ತು ಸತ್ಯವು ಎಂಬುದೆ ವೇದಾಂತದ ಕೊನೆಯ ಮಾತು.

### ೫೯ ಆತ್ಮನ ಸ್ವರೂಪವು

ಮನುಷ್ಯನ ಇಂದ್ರಿಯಗಳು, ಮನಸು, ಮತ್ತು ಬುದ್ಧಿ ಇವು ವಿಶಿಷ್ಟವಾದ ತಮ್ಮ ನಿಯತಕರ್ಮಗಳನ್ನೆ ಮಾಡಬಲ್ಲವು, ಇಂದ್ರಿಯಗಳು ಮನಸಿನ ಅಥವಾ ಮನಸು ಬುದ್ಧಿಯ ಕಾರ್ಯವನ್ನು ಮಾಡಲರಿಯದು. ಹೀಗೆ ಇರಲು ಈ ಇಂದ್ರಿಯಾದಿಗಳಿಂದ ಆದ ಜ್ಞಾನದ ಏಕೀಕರಣವು ವ್ಯಕ್ತಿಯಲ್ಲಿಯ ಯಾವ ಶಕ್ತಿಯಿಂದ ಆಗುವದು, ಎಂಬ ಪ್ರಶ್ನೆಯ ಉತ್ತರವನ್ನು 'ಆತ್ಮನಿಂದ' ಎಂದು ವೇದಾಂತವು ಕೊಡುವದು. ಆತ್ಮನೆ ಎಲ್ಲಕ್ಕೂ ಪರನು, ಶ್ರೇಷ್ಠನು. ಯೋ ಬುದ್ಧೇಃ ಪರತಸ್ತು ಸಃ (೩.೪೨)'ಯಾವನು ಬುದ್ಧಿಗಿಂತ ಮೇಲೊ ಅವನು' ಎಂದು ಗೀತೆಯು ಹೇಳಿರುವದು. ಆತ್ಮನ ಅಸ್ತಿತ್ವದ ಪ್ರತೀತಿಯು ಎಲ್ಲರಿಗೂ ಆಗುವದು. 'ನಾನು ಇಲ್ಲ' ಎಂದು ಯಾರೂ ಅನ್ನುವದಿಲ್ಲ, ಮತ್ತು ಆ ರೀತಿ ವಿಚಾರ ಮಾಡುವದಿಲ್ಲ; ದೇಹ, ಮನ, ಬುದ್ಧಿ, ಪ್ರಾಣ ಇವಾವೂ ಆತ್ಮನಲ್ಲ, ಆತ್ಮನು ಇವುಗಳಿಗಿಂತ ಸೂಕ್ಷ್ಮನಿದ್ದು ಆಚೆಗಿರುವನು; ನಿರ್ಮಲ ಬುದ್ಧಿಯ ಸಹಾಯದಿಂದ ಆತ್ಮನ ಸಾಕ್ಷಾತ್ಕಾರವು

ಆಗುವದು, ಎಂದು ಆಪ್ತವಚನವು ಇರುವದು. ಆದುದರಿಂದ ಎಲ್ಲಕ್ಕೂ ಆಚೆಗೆ ಅತೀಂದ್ರಿಯನೂ ಜ್ಞಾನಸ್ವರೂಪನೂ ಆಗಿ ಆತ್ಮನು ಇರುವನೆಂದು ತಿಳಿಯುವದು ಯೋಗ್ಯವೇ ಸೈ.

### ೬೦ ಆತ್ಮ ಮತ್ತು ಪರಮಾತ್ಮ

ಇನ್ನು ಸೃಷ್ಟಿಯ ಮೂಲವಾದ ನಿರ್ಗುಣ ಪರಬ್ರಹ್ಮ ಮತ್ತು ದೇಹಗತವಾದ ಈ ಆತ್ಮಾ ಇವುಗಳ ಪರಸ್ಪರ ಸಂಬಂಧವನ್ನು ವಿಚಾರಿಸುವ. ಈ ದೇಹದಲ್ಲಿ ಆತ್ಮನ ಮೂಲಕ ಜ್ಞಾನದ ಏಕೀಕರಣವಾಗುವದು. ಸೃಷ್ಟಿಯ ವಿವಿಧತೆಯು ಹಿಂಗಿದಂತೆ ಕೊನೆಗೆ ಒಂದೇ ತ್ರಿಗುಣಾತ್ಮಕ ಪ್ರಕೃತಿಯು ಉಳಿಯುವದು. ಆದರೆ ಅದೂ ಶಾಶ್ವತವಲ್ಲ ಯಾಕಂದರೆ ಅದು ಸಗುಣವು, ಮತ್ತು ಸಗುಣವಿದ್ದುದೆಲ್ಲ ಚಂಚಲವು ಅರ್ಥಾತ್ ವಿನಾಶಿಯು ಎಂದು ಸಿದ್ಧಾಂತವಿರುವದು.ಹಾಗಾದರೆ ಪ್ರಕೃತಿಲಯವಾದಾಗ ಶೂನ್ಯವು ಉಳಿಯುವುದೋ ಎಂದು ಪ್ರಶ್ನೆ ಕೇಳಬಹುದು. ಅದು ಆಗದು. ಯಾಕಂದರೆ ಅಭಾವವೆಂಬುದು ಅಸ್ತಿತ್ವದಲ್ಲಿರಲಾರದು ಮತ್ತು ಅಭಾವದಿಂದ ಮುಂದೆ ಭಾವವು ಉದ್ಭವಿಸಲಾರದು. ಆದುದರಿಂದ ಪ್ರಕೃತಿಲಯದ ಪಶ್ಚಾತ್ ಸಹ ಯಾವ ನಿತ್ಯ ತತ್ವವು ಉಳಿಯುವದೊ ಆದರ ಸಾಮರ್ಥ್ಯದಿಂದಲೆ ಸೃಷ್ಟಿಯಲ್ಲಿಯೂ ಏಕೀಕರಣದ ಅನುಭವವು ಬರುವದು. ಬ್ರಹ್ಮಾಂಡದಲ್ಲಿ ಪ್ರಕೃತಿಗಿಂತ ಬ್ರಹ್ಮನು ಶ್ರೇಷ್ಠನು ಮತ್ತು ಪಿಂಡದಲ್ಲಿ ಅಥವಾ ದೇಹದಲ್ಲಿ ಬುದ್ಧಿಗಿಂತ ಆತ್ಮನು ಶ್ರೇಷ್ಠನು, ಈ ಎರಡರ ಮೂಲಕ ಸಮಷ್ಟಿ ಮತ್ತು ವ್ಯಷ್ಟಿಗಳಲ್ಲಿ ಜ್ಞಾನದ ಏಕೀಕರಣ

ವಾಗುವದು, ಮತ್ತು ಈ ಏಕೀಕರಣವು ಪರಸ್ಪರ ಸಾಪೇಕ್ಷ ವಿರುವದು. ಆದುದರಿಂದ ವ್ಯಕ್ತಿಯಲ್ಲಿ ಅವ್ಯಕ್ತವಾಗಿರುವ ಆತ್ಮಾ ಮತ್ತು ಸಮಷ್ಟಿಯಲ್ಲಿ ಅವ್ಯಕ್ತವಾಗಿರುವ ಪರಬ್ರಹ್ಮ ಇವೆರಡೂ ಒಂದೇ ಬಗೆಯ ತತ್ವಗಳಿರಲಿಕ್ಕೆಬೇಕೆಂದು ತೋರು ತ್ತದೆ. ಇಲ್ಲದಿದ್ದರೆ ವ್ಯಕ್ತಿಗೆ ಸಮಷ್ಟಿಯ ಜ್ಞಾನವಾಗುವದು ಅಸಂಭವವಿರುವದು. ಹೀಗೆ ಒಂದೇ ಬಗೆಯಾಗಿರುವ ಈ ತತ್ವ ಗಳಲ್ಲಿ ಭಾಗಗಳು ಅಥವಾ ಭೇದವು ಕಂಡು ಬಂದರೂ ನಿಜ ವಾಗಿ ಅವು ಅವಿಭಕ್ತ ಮತ್ತು ಅಖಂಡವಿರಲಿಕ್ಕೆಬೇಕೆಂದೇ ಹೇಳಬೇಕಾಗುವದು. ಯುಕ್ತಿಯಿಂದ ತಿಳಿದ ಮಾತಿನ ಸಾಕ್ಷಾತ್ಕಾರವು ನಿರ್ಮಲ ಮತ್ತು ಏಕಾಗ್ರಬುದ್ಧಿಯಿಂದ ಆಗಬಲ್ಲದು. ಅನುಮಾನ ಮತ್ತು ಅನುಭವ ಈ ಎರಡೂ ಪ್ರಮಾಣಗಳಿಂದ ಸಿದ್ಧವಾಗುವ ಸತ್ಯವು ಒಂದೇ, ಅದೇನೆಂದರೆ ಆತ್ಮಾ ಮತ್ತು ಬ್ರಹ್ಮ ಈ ಎರಡೂ ತತ್ವಗಳು ಮೂಲತಃ ಯಥಾರ್ಥವಾಗಿ ಒಂದೇ ಇರುವವು.

### ೬೧ ನಿರ್ಗುಣ ಸಗುಣಗಳ ಸಂಬಂಧವು

ನಿಜವಾಗಿ ನಿರ್ಗುಣ ಬ್ರಹ್ಮನೊಬ್ಬನೇ ಇದ್ದರೆ ಯಾವಾ ಗಲೂ ತೋರುವ ಈ ತ್ರಿಗುಣಾತ್ಮಕ ಪ್ರಕೃತಿಯು ಎಲ್ಲಿಂದ ಬಂದಿತು, ಎಂಬುದು ಮಹತ್ವದ ಪ್ರಶ್ನೆಯಿದೆ. ಸೃಷ್ಟಿಯು ನಾಮರೂಪಾತ್ಮಕವಿರುವದರಿಂದ ಅನಿತ್ಯವಿರುವದು. ಆದರೆ ಈ ನಾಮರೂಪಾತ್ಮಕ ಸೃಷ್ಟಿ ಮತ್ತು ಈ ಸೃಷ್ಟಿಯು ಯಾವು ದರಿಂದ ಉತ್ಪನ್ನವಾಯಿತೋ ಆ ತ್ರಿಗುಣಾತ್ಮಕ ಪ್ರಕೃತಿ ಇವೆರಡರ ಮೂಲವಸ್ತುವು ನಿತ್ಯವಿರುವದು. ಅದರಲ್ಲಿ

ಗುಣವಿಲ್ಲ. ಗುಣವಿದ್ದರೆ ಅದೂ ಚಂಚಲ ಮತ್ತು ಚಲಾಯ ಮಾನವಿರುತ್ತಿತ್ತು. ಅದು ನಿತ್ಯ, ನಿರ್ಗುಣ, ಮತ್ತು ಅದ್ವಿತೀಯವಿರುವದು. ಈ ನಿತ್ಯ ಮತ್ತು ನಿರ್ಗುಣ ಬ್ರಹ್ಮನಿಂದ ಅನಿತ್ಯ ಮತ್ತು ಸಗುಣ ಪ್ರಕೃತಿಯು ಹೇಗೆ ಹುಟ್ಟಿತು ? ಕಾರಣದಲ್ಲಿಲ್ಲದ್ದು ಕಾರ್ಯದಲ್ಲಿ ಎಲ್ಲಿಂದ ಮತ್ತು ಹೇಗೆ ಬಂದಿತು ? ಕಾರ್ಯವು ಕಾರಣದಲ್ಲಿ ಸೂಕ್ಷ್ಮರೂಪದಿಂದ ಹುದುಗಿಕೊಂಡಿರುವುದೆಂದು ಸಾಂಖ್ಯರ ಗುಣವಿಕಾಸವಾದವು ಹೇಳುವದು ಮತ್ತು ಅದು ವೇದಾಂತಕ್ಕೂ ಸಮ್ಮತವಿರುವದು. ಆದರೆ ಎರಡು ವಸ್ತುಗಳಲ್ಲಿ ಕಾರ್ಯಕಾರಣ ಸಂಬಂಧವಿದ್ದಾಗ ಮಾತ್ರ ಈ ವಾದವು ಯುಕ್ತವೆಂಬುದನ್ನು ನಾವು ಲಕ್ಷದಲ್ಲಿಡಬೇಕು. ಒಂದು ವಸ್ತು ಮತ್ತು ಅದರ ತೋರಿಕೆ ಇವೆರಡರಲ್ಲಿಯ ಸಂಬಂಧವನ್ನು ಕುರಿತು ಗುಣವಿಕಾಸವಾದವು ಅನ್ವಯಿಸಲಾರದು. ಒಂದೇ ಸೂರ್ಯನ ಅನೇಕ ಪ್ರತಿಬಿಂಬಗಳು ಜಲಾಶಯಗಳಲ್ಲಿ ಕಾಣುವವು. ಈ ಪರಿಣಾಮವು ಸೂರ್ಯನ ಯಾವದೇ ಕಾರ್ಯದಿಂದ ಆದುದು, ಎಂದು ಯಾರೂ ಹೇಳರು. ಸೂರ್ಯನಲ್ಲಿ ಯತ್ಕಿಂಚಿತ್ ಪರಿವರ್ತನವು ಸಹ ಆಗದೆ ಅವನ ಸಾವಿರಾರು ಪ್ರತಿಬಿಂಬಗಳು ಅಲ್ಲಲ್ಲಿ ಕಾಣಬಹುದು. ಈ ಉದಾಹರಣೆಯಲ್ಲಿ ಆ ಪ್ರತಿಬಿಂಬಗಳು ಸೂರ್ಯನ ವಿವರ್ತಗಳು. ಅದೇ ರೀತಿ ಮನುಷ್ಯನು ನಟನೆಂದು ನಾಟಕಗಳಲ್ಲಿ ಅನೇಕ ರೂಪಗಳನ್ನು ಧರಿಸಿದರೂ ಅವನ ಮೂಲಸ್ವರೂಪವು ಇದ್ದಂತೆಯೆ ಇರುವದು, ಅವನ ನಟರೂಪಗಳು ಮಾತ್ರ ಕ್ಷಣಿಕ ಮತ್ತು ನಶ್ವರವಿರುವವು,

ನಾಟಕದ ಪೂರ್ವದಲ್ಲಿ ಇದ್ದಂತೆಯೆ ಅವನು ನಾಟಕದ ನಂತರವಾದರೂ ಇರುವನು. ಈ ಪ್ರಕಾರ ಮೂಲ ತತ್ವದಲ್ಲಿ ಯಾವ ಬಗೆಯ ಬದಲೂ ಆಗದೆ ಪರಿವರ್ತನದ ತೋರಿಕೆಯು ಕಾಣುವದು. ಅದಕ್ಕೆ ವಿವರ್ತವೆನ್ನುವರು ಮತ್ತು ಈ ತರದ ವಾದಕ್ಕೆ ವಿವರ್ತವಾದವೆನ್ನುವರು. ಬ್ರಹ್ಮ ಮತ್ತು ಪ್ರಕೃತಿ ಇವುಗಳ ಸಂಬಂಧವು ಸೂರ್ಯ ಮತ್ತು ಅವನ ಪ್ರತಿಬಿಂಬ ಅಥವಾ ಮನುಷ್ಯ ಮತ್ತು ಅವನ ನಟರೂಪ, ಇವುಗಳ ಸಂಬಂಧದಂತೆ ಕೇವಲ ತೋರಿಕೆಯು ಪೂರ್ತಿಯೆ ಇರುವದು. ಮೂಲ ತತ್ವವು ತನ್ನ ತೋರಿಕೆಗಿಂತ ಬೇರೆ ಮತ್ತು ಅದರಿಂದ ಅಲಿಪ್ತವೆ ಇರುವದು.

### ೬.೨ ಲೀಲೆಯ ಕಾರಣವು

ಇನ್ನು ನಿರ್ಗುಣ ಬ್ರಹ್ಮನೇ ಆತ್ಯಂತಿಕ ಸತ್ಯವು ಎಂಬುದು ನಿಜವಿದ್ದರೆ ಈ ತ್ರಿಗುಣಾತ್ಮಕ ಪ್ರಕೃತಿಯು ತೋರಿಕೆಯಾದರೂ ಯಾಕೆ ಕಾಣುವದು, ಇದರ ಉತ್ತರವು ನಮಗೆ ಯಾವ ವಾದದಿಂದಲೂ ದೊರೆಯುವದಿಲ್ಲ. ಇಲ್ಲಿ ಗುಣವಿಕಾಸವಾದ ಹಾಗೂ ವಿವರ್ತವಾದ ಇವೆರಡೂ ಕುಂಠಿತವಾಗುವವು. ಅವ್ಯಕ್ತ, ನಿತ್ಯ, ಅವಿಭಕ್ತ, ಸರ್ವವ್ಯಾಪಿ ಬ್ರಹ್ಮತತ್ವದ ಸಾಕ್ಷಾತ್ಕಾರವು ನಿರ್ಮಲ ಮತ್ತು ಅಂತರ್ಮುಖವಾದ ಬುದ್ಧಿಯ ಮುಖಾಂತರ ಆಗುವದು, ಆದರೆ ಆ ತತ್ವದಿಂದ ಈ ವ್ಯಕ್ತ ಸೃಷ್ಟಿಯು ಹೇಗೆ ನಿರ್ಮಾಣವಾಯಿತು ಅಥವಾ ಆ ತತ್ವವು ಈ ಅನಿತ್ಯ, ವಿಭಕ್ತ ಸೃಷ್ಟಿಯಂತೆ ಯಾಕೆ ತೋರುವದು ಇದು ತಿಳಿಯದು. ಈ ಪ್ರಸಂಗದಲ್ಲಿ ಇದು ಬ್ರಹ್ಮ

ಲೀಲೆಯು ಎಂದು ಹೇಳಿ ಸುಮ್ಮನಾಗಬೇಕಾಗುತ್ತದೆ. ಇನ್ನು ಬ್ರಹ್ಮನು ನಿರ್ಗುಣನು ಎಂದರೆ ಅರ್ಥವೇನು ? ಇದನ್ನು ನೋಡುವ.ನಮಗೆ ಈ ಜಗತ್ತಿನಲ್ಲಿ ಪಂಚಜ್ಞಾನೇಂದ್ರಿಯಗಳಿಂದ ತಿಳಿಯತಕ್ಕ ಗುಣಗಳಾವೂ ಬ್ರಹ್ಮನಲ್ಲಿಲ್ಲ, ಎಂದು ಅಂದರೂ ಇವುಗಳ ಹೊರತು ಬೇರೆ ಗುಣಗಳು ಅವನಲ್ಲಿವೆಯೊ ಇಲ್ಲವೊ ಎಂದು ನಿಶ್ಚಯವಾಗಿ ಹೇಳುವದು ಅಸಾಧ್ಯವು. ಆದುದರಿಂದ ಆ ವಿಷಯವನ್ನೆತ್ತುವದು ನಿರರ್ಥಕವು. ಈ ವಾಕ್ಯದಿಂದ ನಿರ್ಗುಣಶಬ್ದದ ಅರ್ಥವು ಸ್ಪಷ್ಟವಾಗುವದು. ನಾವು ನಮ್ಮ ಜ್ಞಾನೇಂದ್ರಿಯಗಳ ದ್ವಾರದಿಂದ ಅರಿಯಬಲ್ಲ ಗುಣಗಳಾವೂ ಬ್ರಹ್ಮನಲ್ಲಿಲ್ಲ ಎಂಬುದೆ ಬ್ರಹ್ಮನು ನಿರ್ಗುಣನು ಎಂಬ ವಿಧಾನದ ಸ್ಪಷ್ಟ ಅರ್ಥವು.

### ೬೩ 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂಬುದರ ಅರ್ಥ

ಸಾಂಖ್ಯರ ಪ್ರಕೃತಿಯನ್ನು ವೇದಾಂತಿಗಳು ಮಾಯೆಯೆಂದು ಕರೆಯುವರು. ಆ ಮಾಯೆ ಎಲ್ಲಿಂದ ಬಂದಿತು ಇದನ್ನು ಹೇಳಲಿಕ್ಕಾಗುವುದಿಲ್ಲವಾದ್ದರಿಂದ ಅದಕ್ಕೆ ಅತರ್ಕ್ಯವೆಂದು ಹೇಳುವರು. ಸ್ಥಿತಪ್ರಜ್ಞನು ಅಂತರ್ದರ್ಶಿಯಾದಾಗ ಮಾಯೆ ಮಾಯವಾಗಿ ಅದರ ಛಾಯೆ ಅಥವಾ ಹೆಸರು ಸಹ ಉಳಿಯದೆ ಸರ್ವತ್ರ ಕೇವಲ ಏಕವಾದ ಅದ್ವಿತೀಯ ಬ್ರಹ್ಮನ ಪ್ರತೀತಿಯಾಗುವದು. ಮನುಷ್ಯನು ಕನಸಿನಲ್ಲಿ ಒಳಿತು ಕೆಡುಕು ಅನುಭವಗಳನ್ನು ಪಡೆಯುವನು, ಆಗ ಅವು ಸತ್ಯವೆಂದೆ ಭಾವನೆಯಾಗುವದು; ಆದರೆ ಜಾಗ್ರತ ಸ್ಥಿತಿಯಲ್ಲಿ ಅವೆಲ್ಲ ಲಯಹೊಂದಿ ಇದ್ದವೊ ಇಲ್ಲವೊ ಎಂಬಂತೆ ಆಗುವವು.

ಆದುದರಿಂದ ಅವು ನಿರರ್ಥಕ ಅಥವಾ ಮಿಥ್ಯೆಯೆನಿಸುವವು. ಅದೇ ಮೇರೆಗೆ ಬ್ರಹ್ಮಾನುಭವವಾಗುವ ಸಮಾಧಿ ಅವಸ್ಥೆಯಲ್ಲಿ, ಎಚ್ಚರಿದ್ದಾಗ ಸತ್ಯವೆಂದು ತೋರುವ ಸಗುಣ ಸೃಷ್ಟಿಯು ಪೂರ್ಣ ಅಡಗಿ ಅದರ ಸ್ಮರಣವು ಕೂಡ ಆಗುವದಿಲ್ಲ; ಆದುದರಿಂದ ಆ ಅವಸ್ಥೆಯಲ್ಲಿ ಈ ಸೃಷ್ಟಿಯು ಮಿಥ್ಯೆಯೆಂದು ಎಣಿಸಲ್ಪಡುವದು. ಜಾಗ್ರತ ಮತ್ತು ಸ್ವಪ್ನ ಅವಸ್ಥೆಗಳ ಅನುಭವವನ್ನು ಹೋಲಿಸಿದರೆ ಸ್ವಪ್ನದ ಅನುಭವವು ಗೌಣ, ಕನಿಷ್ಠ, ಮತ್ತು ನಿರರ್ಥಕ ಅಥವಾ ಮಿಥ್ಯೆ ಎನಿಸುವಂತೆ ಸಮಾಧಿ ಮತ್ತು ಜಾಗ್ರತ ಅವಸ್ಥೆಗಳಲ್ಲಿಯ ಅನುಭವಗಳನ್ನು ಹೋಲಿಸಿದರೆ ಜಾಗ್ರತ ಅನುಭವಗಳು ಗೌಣ,ಕನಿಷ್ಠ, ಮತ್ತು ಮಿಥ್ಯೆಯೆನಿಸಿದರೆ ಆಶ್ಚರ್ಯವಲ್ಲ. ಬ್ರಹ್ಮಸತ್ಯಂ ಜಗನ್ಮಿಥ್ಯಾ, ಎಂಬ ವೇದಾಂತದ ಸಾರಭೂತವಾದ ವಚನದ ಅರ್ಥವಾದರೂ ಇದೇ ಇರುವದು. ಚಿತ್ತದ ಏಕಾಗ್ರ ಮತ್ತು ಅಂತರ್ಮುಖ ಅವಸ್ಥೆಯಲ್ಲಿ ಏಕಮೇವಾದ್ವಿತೀಯವಾದ ಕೇವಲ ಬ್ರಹ್ಮನ ಪ್ರತೀತಿಯಷ್ಟೇ ಆಗುತ್ತಿರುವುದರಿಂದ ಮತ್ತು ಜಗತ್ತು ಅಲ್ಲಿ ಇಲ್ಲದೆ ಇರುವುದರಿಂದ ಬ್ರಹ್ಮವೇ ಆತ್ಯಂತಿಕ ಸತ್ಯವು ಮತ್ತು ಜಗತ್ತು ಮಿಥ್ಯೆಯು, ಎಂಬುದೆ ಈ ವಚನದ ತಾತ್ಪರ್ಯವು. ಇನ್ನು ಜಾಗ್ರತ ಸ್ಥಿತಿಯಲ್ಲಿ ಪ್ರತೀತವಾಗುವ ಜಗತ್ತು ಜಾಗ್ರತ ಸ್ಥಿತಿಯಲ್ಲಿ ಇದ್ದೇ ಇರುವದು ಮತ್ತು ಈ ಸ್ಥಿತಿಯಲ್ಲಿ ಇದು ಸತ್ಯವೆಂದು ಹೇಳಿದರೆ ಅದೂ ತಪ್ಪಾಗದು. ಆದರೆ ಆತ್ಯಂತಿಕ ಸತ್ಯವನ್ನು ಶೋಧಿಸುವುದೆ ತತ್ವಜ್ಞಾನದ ಗುರಿಯಿರುವುದರಿಂದ ವೇದಾಂತವು ಈ ಸತ್ಯಕ್ಕೆ ವ್ಯಾವಹಾ

ರಿಕ ಸತ್ಯವೆಂಬ ಮತ್ತು ಆತ್ಯಂತಿಕ ಸತ್ಯಕ್ಕೆ ಪಾರಮಾರ್ಥಿಕ ಸತ್ಯವೆಂಬ ಹೆಸರನ್ನಿಟ್ಟಿದೆ. ಸಾರಾಂಶವೇನಂದರೆ, ಜಗತ್ತಿನ ವಿವಿಧತೆಯ ಏಕೀಕರಣ ಮಾಡುತ್ತ ಸಾಗಿದರೆ ಒಂದು ಬದಿಗೆ ತ್ರಿಗುಣಾತ್ಮಕ ಪ್ರಕೃತಿಗೆ ಹೋಗಿ ಮುಟ್ಟುವೆವು; ಬುದ್ಧಿಯನ್ನು ಅಂತರ್ಮುಖ ಮಾಡಿ ಸತ್ಯಶೋಧನೆ ನಡೆಸಿದರೆ ಎರಡನೇ ಬದಿಗೆ ಅಜ, ಅವ್ಯಕ್ತ, ಅಚಲ, ಇಂದ್ರಿಯಾತೀತ ನಿರ್ಗುಣ ಬ್ರಹ್ಮನ ಅನುಭವವಾಗುವದು. ಪರಂತು ನಿರ್ಗುಣ ನಿತ್ಯ ಬ್ರಹ್ಮನಿಂದ ಸಗುಣ ಚಂಚಲ ಮಾಯೆ ಅಥವಾ ಸೃಷ್ಟಿ ಹೇಗೆ ಉತ್ಪನ್ನವಾಯಿತು, ಇದನ್ನು ಹೇಳುವದು ಮಾತ್ರ ಮಾನವೀ ಶಕ್ತಿಯ ಹೊರಗಿನ ವಿಷಯವಿರುವದೆಂದು ಹೇಳಬೇಕಾಗುವದು.

### ೩೪ ಆತ್ಮಜ್ಞಾನವು

ಯಾವ ಆತ್ಮನು ಸರ್ವವ್ಯಾಪಿಯೂ ಸರ್ವಾಂತರ್ಯಾಮಿಯೂ ಇರುವನೊ ಅವನ ಜ್ಞಾನವು ಕೇವಲ ತರ್ಕವಿವೇಚನಾದಿಗಳಿಂದ ಆಗದು. ಆ ರೀತಿ ಆದ ಜ್ಞಾನವು ನಿಜವಾದ ಆತ್ಮಜ್ಞಾನವೆ ಅಲ್ಲ. 'ವಿಭಕ್ತವಾಗಿ ತೋರುವ ಭೂತಮಾತ್ರಗಳಲ್ಲಿ ಅವನು ಏಕನೂ ಅವ್ಯಯನೂ ಅವಿಭಕ್ತನೂ ಆಗಿ ಇರುವನು' (೧೮.೨೦) ಎಂದು ಅಂತಃಕರಣಕ್ಕೆ ಆದ ಅನುಭವವೆ ಸಾತ್ವಿಕ ಹಾಗೂ ನಿಜವಾದ ಜ್ಞಾನವೆನಿಸುವದು. ಈ ಬಗೆಯ ಅವಿಭಕ್ತ ಆತ್ಮಭಾವವು ನೆಲೆಗೊಳ್ಳಲಿಕ್ಕೆ ಯಾವ ಗುಣಗಳು ಸಹಾಯಕವಾಗುವವೊ ಆ ಅಮಾನಿತ್ವ, ಅದಂಭಿತ್ವ, ಅಹಿಂಸೆ, ಕ್ಷಮೆ ಮುಂತಾದವುಗಳೂ ಗೀತೆಯ ದೃಷ್ಟಿಯಿಂದ

(೧೩.೭-೧೧) ಜ್ಞಾನವೆ ಎನಿಸುವವು. ಇದರ ಮೇಲಿಂದ ಇಲ್ಲಿ ಜ್ಞಾನವೆಂದರೆ ಕೇವಲ ಬೌದ್ಧಿಕ ಜ್ಞಾನವಲ್ಲ, ಎಂಬುದು ಸ್ಪಷ್ಟವಾಗುವದು. ಈ ರೀತಿ ಆತ್ಮಜ್ಞಾನವು ಭಾವನೆಯ ವಿಷಯವು, ಅನುಭವದ ವಿಷಯವು.ಈ ಅನುಭವವು ಯಾವನ ರೋಮರೋಮದಲ್ಲಿ ಭೇದಿಸಿ ಅದರಂತೆ ಅವನ ಸ್ವಭಾವ ವಾಗುವದೋ ಮತ್ತು ಯಾವನ ವಿಚಾರ ಆಚಾರಗಳೆಲ್ಲ ಈ ಭಾವನೆಯನ್ನನುಸರಿಸುವವೋ ಅವನೇ ನಿಜಜ್ಞಾನಿಯು, ಅವನೇ ಆತ್ಮವಿದನು, ಮುಕ್ತನು. ಮುಕ್ತಿ ಅಥವಾ ಮೋಕ್ಷ ಎಂಬುದು ಈ ಬಗೆಯಾಗಿ ಅಂತಃಕರಣದ ಒಂದು ಉತ್ಕೃಷ್ಟ ಅವಸ್ಥೆಯು. ಅದಕ್ಕಾಗಿ ನಾವೆಲ್ಲಿಯೂ ದೇಶದೇಶಾಂತರಕ್ಕೆ ಹೋಗಬೇಕಾಗಿಲ್ಲ. ಕರ್ಮಪರಾಯಣರಿರುವಾಗಲೆ ಮಾನ ಸಿಕ ಪ್ರಯತ್ನ ಮಾಡಿ ಆ ನಿಲವನ್ನು ನಾವು ನಮ್ಮಲ್ಲಿ ನಿತ್ಯ ಅಳವಡಿಸಿರಬಹುದು. ಯಾವನಲ್ಲಿ ಅನುಪಮ ಆತ್ಮೌಪಮ್ಯ ಭಾವವು ನೆಲೆಸಿದೆಯೊ ಅವನ ತೇಜವು ಮುಚ್ಚದು; ಅವನ ಬುದ್ಧಿಯು ದೇಹಲೀ ದೀಪದಂತೆ ಅಂತರ್ಬಾಹ್ಯ ಜೀವನವನ್ನು ಬೆಳಗುವದು. ಬಾಹ್ಯತಃ ಅಲ್ಲೋಲಕಲ್ಲೋಲವಾದಂತೆ ಕಂಡರೂ ಶಾಂತಿಗರ್ಭವಾದ ಗಂಭೀರ ಸಮುದ್ರದಂತೆ ಅವನ ಅಂತರವು ಆತ್ಮೌಪಮ್ಯಭಾವದಿಂದುಂಟಾದ ಆತ್ಯಂತಿಕ ಸುಖ-ದಿಂದ ಪ್ರಶಾಂತವೂ ಸಮವೂ ಇರುವದು, ಮತ್ತು ಅವನು ಅಹರ್ನಿಶ ಲೋಕಹಿತಾರ್ಥ ಮಾಡುತ್ತಿರುವ ಕರ್ಮವು ಅವನ ಸಾಮ್ಯಬುದ್ಧಿಯ ಮೂಲಕ ನಿಷ್ಕಂಟಕವೂ ನಿಷ್ಕಲಂಕವೂ ಲೀಲಾರೂಪಿಯೂ ಆಗುವದು. ಅವನ ಅಖಂಡ ಆತ್ಮಪ್ರತೀತಿ

ಯಿಂದ ನೀತಿಧರ್ಮಗಳು ನಿರ್ಮಲನಿರ್ಝರಗಳಂತೆ ಹೊರ ಹೊಮ್ಮುವವು. ವ್ಯವಹಾರದಲ್ಲಿ ಅವನ ಬುದ್ಧಿಯು ಯಾವಾಗಲೂ ಸಮ, ಸ್ಥಿರ, ಮತ್ತು ಅಚಲವಿರುವದು. ಹೀಗೆ ಕರ್ಮಯೋಗದ ಆಧಾರವಾದ ಸಮಬುದ್ಧಿಗೆ ಆತ್ಮೌಪಮ್ಯತೆಯೇ ಮೂಲವು. ಕಾಮ ಕ್ರೋಧಾದಿಗಳ ಸಂಯಮ, ಅನಾಸಕ್ತಿ, ಹಾಗೂ ದಕ್ಷತೆಯಿಂದ ಸ್ವಕರ್ಮದ ಆಚಾರಣೆ, ಮತ್ತು ಎಲ್ಲೆಲ್ಲಿಯೂ ಒಂದೇ ಆತ್ಮನಿರುವನೆಂಬ ಸತ್ಯವನ್ನನುಭವಿಸುವ ಸತತ ಪ್ರಯತ್ನ ಇದೇ ಆತ್ಮೌಪಮ್ಯತೆಯನ್ನು ಪಡೆಯುವ ರಾಜಮಾರ್ಗವು. ಶಾಶ್ವತ ಧರ್ಮದ ಮತ್ತು ಏಕಾಂತಿಕ ಸುಖದ ಆಧ್ಯಾತ್ಮಿಕ ಮಾರ್ಗವು ಇದೇ.

# ೯ ಸನ್ಯಾಸ ಮತ್ತು ಕರ್ಮಯೋಗ ಇವುಗಳ ತುಲನೆ

### ೬೫ ಕೃತಾರ್ಥನು ಕರ್ಮವನ್ನು ಮಾಡಬೇಕೋ ?

ಕರ್ಮಬಂಧನದಿಂದ ಬಿಡುಗಡೆ ಹೊಂದುವ ಪ್ರವೃತ್ತಿಯು ಆತ್ಮನಲ್ಲಿ ಸ್ವಾಭಾವಿಕವಿರುವದು ಮತ್ತು ಕರ್ಮವನ್ನು ಬಿಡದೆ ಕರ್ಮಚಕ್ರದೊಳಗಿಂದ ಪಾರಾಗಿ ಆತ್ಮಸುಖವನ್ನು ಪಡೆಯುವದು ಸಾಧ್ಯವು ಎಂಬುದನ್ನು ಹೋದ ಪ್ರಕರಣದಲ್ಲಿ ನೋಡಿದೆವು.ಅದೇ ರೀತಿ,ಆತ್ಮೌಪಮ್ಯತೆಯು ಮನುಷ್ಯನ ಅಂತಃಕರಣದಲ್ಲಿ ನೆಲೆಗೊಳ್ಳಬಹುದಾದ ಎಲ್ಲಕ್ಕೂ ಶ್ರೇಷ್ಠ ಮತ್ತು ಅತುಲ ಭಾವನೆಯಿರುವದು, ಎಂಬುದನ್ನೂ ನೋಡಿದೆವು. ಈ ಭಾವನೆಯು ಕೆಲವರಲ್ಲಿ ನೈಸರ್ಗಿಕವಿರಬಹುದು. ಆದರೆ ಬಹುಶಃ ಎಲ್ಲರೂ ದೀರ್ಘಪ್ರಯತ್ನದಿಂದಲೆ ಇದನ್ನು ಅಳವಡಿಸಬೇಕಾಗುವದು. ಈ ಪ್ರಯತ್ನವನ್ನು ಕೈಕೊಂಡವರು ಸ್ವಕರ್ಮವನ್ನು ಕರ್ತವ್ಯಬುದ್ಧಿಯಿಂದ ಮಾಡುವರು, ರಾಗದ್ವೇಷಾದಿಗಳನ್ನು ಸಂಯಮಿಸುವರು, ಫಲಾಸಕ್ತಿಯನ್ನು ನಿರ್ಮೂಲಿಸುವರು, ಬುದ್ಧಿಯನ್ನು ಶಾಂತ ಮತ್ತು ಸ್ಥಿರಗೊಳಿಸುವರು; ಈ ಸಾಧನದ ಮೂಲಕ ಚಂಚಲ ಇಂದ್ರಿಯ ಸುಖಗಳ ಅಭಿಲಾಷೆಯಳಿದು ಆತ್ಮಸುಖದ ಜ್ಯೋತಿಯು ತಲೆದೋರುವದು, ಸ್ವಪರಭಾವವು ನಷ್ಟವಾಗಿ ಆತ್ಮೌಪಮ್ಯತೆಯು ಬೇರೂರುವದು. ಹೀಗೆ ಮನುಷ್ಯನು ಪೂರ್ಣ ವಿರಕ್ತನಾದನೆಂದರೆ ಎಲ್ಲರಿಗೂ ಸಾಮಾನ್ಯವಿರುವ ಕರ್ಮಕಾಮ

ನೆಯು ಅವನಲ್ಲಿಲ್ಲದಂತಾಗುವದು. ಅವನು ಮುಂದೆ ಏನು ಮಾಡಬೇಕು, ಯಾತರಿಂದ ಪ್ರೇರಿತನಾಗಿ ಕರ್ಮವನ್ನು ಕೈಕೊಳ್ಳಬೇಕು ? ವಿರಕ್ತಸ್ಥಿತಿಯ ಪರಮಾವಧಿಯನ್ನು ಮುಟ್ಟಿ ಆತ್ಮಾಸಕ್ತನಾದ ಜ್ಞಾನಿಯು ಅಂತಃಸುಖವನ್ನು ಪಡೆದು ಕೃತಾರ್ಥನಾದ ಬಳಿಕ ತನ್ನ ಜೀವನವನ್ನು ಯಾವ ರೀತಿ ಕಳೆಯಬೇಕು ? ಪೂರ್ಣ ಆತ್ಮೌಪಮ್ಯ ಬುದ್ಧಿಯನ್ನು ಪಡೆದ ಬಳಿಕ ಕರ್ಮವನ್ನು ಮಾಡಬೇಕೋ ಬಿಡಬೇಕೋ? ಈ ಪ್ರಶ್ನೆಗಳು ಬಹಳ ಮಹತ್ವವುಳ್ಳವುಗಳು. ಇವುಗಳಿಗೆ ಯೋಗ್ಯ ಉತ್ತರವನ್ನು ಕೊಟ್ಟು ಅದರಂತೆ ವರ್ತಿಸಿದರೆ ವ್ಯಕ್ತಿ ಮತ್ತು ಸಮಷ್ಟಿಯ ಆತ್ಯಂತಿಕ ಹಿತವು ಸಾಧಿಸುವದು. ಆದುದರಿಂದ ಅವುಗಳನ್ನು ವಿಚಾರಿಸುವ.

### ೬೬ ಕರ್ಮಸನ್ಯಾಸವು ಮತ್ತು ಕರ್ಮಯೋಗವು

ಜೀವನಕ್ಕೆ ಆಧಾರಭೂತವಾದ ಈ ಪ್ರಶ್ನೆಗಳಿಗೆ ಎರಡು ಉತ್ತರಗಳು ಸಂಭವಿಸುವವು. ಪೂರ್ಣವೈರಾಗ್ಯಶೀಲನಿಗೆ ಮತ್ತು ಆತ್ಮಜ್ಞಾನಿಗೆ ಸ್ವಂತಕ್ಕಾಗಿ ಪ್ರಾಪ್ತವ್ಯವೆಂಬುದೇನೂ ಉಳಿಯದಿರುವುದರಿಂದ ಕರ್ತವ್ಯವೆಂಬುದೂ ಉಳಿಯಲಾರದು; ತಸ್ಮಾತ್ ಅವನು ಕರ್ಮಸನ್ಯಾಸ ಮಾಡಿ ಕೇವಲ ಅಂತರ್ಮುಖ ಸ್ಥಿತಿಯಲ್ಲಿ ಇಲ್ಲವೆ ಜ್ಞಾನಮಗ್ನನಾಗಿ ದೇಹಪಾತಕ್ಕಾಗಿ ಯಮದೂತರ ಹಾದೀ ನೋಡುತ್ತ ಕಾಲಕಳೆಯಬೇಕು, ಎಂದು ನಿವೃತ್ತಿಪರಾಯಣ ಸಾಂಖ್ಯಯೋಗವು ಅಥವಾ ಕರ್ಮಸನ್ಯಾಸಮಾರ್ಗವು ಒಂದು ಉತ್ತರವನ್ನು ಕೊಡುವದು. ಪ್ರವೃತ್ತಿಪರಾಯಣ ಕರ್ಮಯೋಗವು ಇದ

ರಿಂದ ತೀರ ಭಿನ್ನವಾದ ಉತ್ತರವನ್ನು ಅಂದರೆ ವೈರಾಗ್ಯ ಮತ್ತು ಜ್ಞಾನ ಇವು ಆಳವಟ್ಟರೂ ಪ್ರಪಂಚವನ್ನೆಲ್ಲ ಅವಗಣಿಸಿ ಅಂತರ್ಮುಖಿರಾಗಿ ಸ್ವಸ್ಥ ಕೂಡದೆ ಸಾಮ್ಯಬುದ್ಧಿಯಿಂದ ಲೋಕಸಂಗ್ರಹಾರ್ಥವಾಗಿ ಆಮರಣ ಕರ್ಮಮಾಡುತ್ತಲೆ ಇರಬೇಕು, ಎಂಬ ಉತ್ತರವನ್ನು ಕೊಡುವದು. ಈ ಎರಡು ಮಾರ್ಗಗಳ ಬಗ್ಗೆ ಗೀತೆಯ ಅಭಿಪ್ರಾಯವೇನಿರುವದು ನೋಡುವ.

### ೬೭ ಗೀತೆಯ ಮತವು

ಗೀತೆಯನ್ನು ಸಾಂಪ್ರದಾಯಿಕ ಗ್ರಂಥವನ್ನಾಗಿ ಮಾಡುವ ಪ್ರಯತ್ನವು ಪ್ರಾರಂಭವಾದಂದಿನಿಂದ ಅದರ ಸರಲ ಮತ್ತು ಸ್ಪಷ್ಟ ಅರ್ಥವು ಮರೆಯಾಗಿ ಹೋಯಿತು. ಕರ್ಮಯೋಗ ಮತ್ತು ಕರ್ಮಸನ್ಯಾಸ ಎಂಬ ಎರಡು ಸ್ವತಂತ್ರ ಹಾಗೂ ತುಲ್ಯಬಲ ಮೋಕ್ಷ ಮಾರ್ಗಗಳು ಇರುವವು ಎಂಬ ಪ್ರಾಚೀನ ವಿಚಾರವು ಅಡಗಿ, ಯೋಗವು ಸನ್ಯಾಸದ ಸಾಧನವು ಅರ್ಥಾತ್ ಪೂರ್ವಾಂಗವು ಮತ್ತು ಮೋಕ್ಷಕ್ಕಾಗಿ ಸನ್ಯಾಸವು ಅನಿವಾರ್ಯವು, ಎಂಬ ಮತವು ಪ್ರಚಾರದಲ್ಲಿ ಬಂದಿತು. ಆದರೆ ಈ ಮತವು ಸದೋಷವೂ ಗೀತೆಗೆ ಅಪಾರ್ಥವನ್ನು ಕಲ್ಪಿಸುವಂತಹದೂ ಇರುವದೆಂಬದು ಗೀತೆಯ ನಿಃಪಕ್ಷಪಾತಿ ಅಭ್ಯಾಸದಿಂದ ಸಿದ್ಧವಾಗುವದು. ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ... ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ (೩.೩)–'ಈ ಲೋಕದಲ್ಲಿ ಜ್ಞಾನಿಗಳ ಜ್ಞಾನನಿಷ್ಠೆ ಮತ್ತು ಕರ್ಮಯೋಗಿಗಳ ಕರ್ಮ

ನಿಷ್ಠೆ, ಎಂಬ ಎರಡು ಪ್ರತ್ಯೇಕ ನಿಷ್ಠೆಗಳು ಇರುವವು,'ಎಂದು ಗೀತೆಯ ಸ್ಪಷ್ಟ ವಚನವಿರುವದು. 'ಕರ್ಮಸನ್ಯಾಸ ಮತ್ತು ಕರ್ಮಯೋಗ ಎಂಬ ಎರಡು ಸ್ವತಂತ್ರ ಪಂಥಗಳಿರುವವು, ಎರಡೂ ನಿಃಶ್ರೇಯಸವನ್ನು ಪ್ರಾಪ್ತ ಮಾಡಿಕೊಡುವಂತಹವು ಎರಡರಲ್ಲಿ ಒಂದು ಮಾರ್ಗದ ಯಥಾರ್ಥ ಆಚರಣೆಯಿಂದ ಸಹ ಒಂದೇ ಅತ್ಯಂತ ಶ್ರೇಷ್ಠಫಲವು ದೊರೆಯುವದು. ಯಾವ ಮೋಕ್ಷವು ಸನ್ಯಾಸದಿಂದ ಸಾಧ್ಯವೊ ಅದೇ ಯೋಗದಿಂದ ಸಾಧ್ಯವು,' ಎಂಬ ನಿಃಸಂದಿಗ್ಧ ವಿಚಾರಸರಣಿಯು ಐದನೆಯ ಅಧ್ಯಾಯದಲ್ಲಿ ಬಂದಿದೆ.ಹದಿಮೂರನೆಯ ಅಧ್ಯಾಯದಲ್ಲಿಯೂ ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ (೧೩.೨೪)–'ಕೆಲವರು ಸಾಂಖ್ಯಯೋಗದಿಂದ ಅನ್ಯರು ಕರ್ಮ ಯೋಗದಿಂದ, ಆತ್ಮದರ್ಶನವನ್ನು ಪಡೆಯುವರು' ಎಂದು ಸಾಧಕರ ಎರಡು ಬೇರೆ ಬೇರೆ ವರ್ಗಗಳು ವರ್ಣಿಸಲ್ಪಟ್ಟಿವೆ. ಇದನ್ನೆಲ್ಲ ವಿಚಾರಿಸಿದರೆ, ಗೀತೆಯಲ್ಲಿ ಕರ್ಮಯೋಗ ಮತ್ತು ಕರ್ಮಸನ್ಯಾಸ ಇವುಗಳ ಸಂಬಂಧವು ಅಂಗ ಮತ್ತು ಅಂಗೀ ಅಥವಾ ಸಾಧ್ಯ ಮತ್ತು ಸಾಧನ, ಹೀಗೆ ಇರದೆ ಅವೆರಡೂ ಅಷ್ಟೇ ಪ್ರಶಸ್ತ ಹಾಗೂ ಸ್ವತಂತ್ರವಾದ ಮೋಕ್ಷಮಾರ್ಗ ಗಳಿರುವವೆಂದು ಗೀತೆಯ ಮತವಿರುವದೆಂಬುದು ನಿಚ್ಚಳವಾಗಿ ವ್ಯಕ್ತವಾಗುವದು.

### ೬೮ ಎರಡು ತುಲ್ಯಬಲ ಮಾರ್ಗಗಳು

ದಶ ಉಪನಿಷತ್ತುಗಳು ಅಧ್ಯಾತ್ಮಜ್ಞಾನದ ಮೂಲ ಭಾಂಡಾರವು. ಅವುಗಳಲ್ಲಿ ಕರ್ಮಯೋಗಕ್ಕಿಂತ ಸನ್ಯಾಸದ

ಪ್ರಾಬಲ್ಯವೆ ಹೆಚ್ಚು ಕಂಡು ಬಂದರೂ ಹಲವು ಉಪನಿಷತ್ತು ಗಳಲ್ಲಿ ಕರ್ಮಯೋಗಕ್ಕೂ ಸಾಕಷ್ಟು ಮಹತ್ವವು ಕೊಡಲ್ಪಟ್ಟಿದೆ. ಈಶಾವಾಸ್ಯವು, 'ಕರ್ಮ ಮಾಡುತ್ತಲೆ ನೂರು ವರ್ಷ ಬಾಳುವ ಬಯಕೆಯುಳ್ಳವರಾಗಬೇಕು. ಎಲ್ಲೆಲ್ಲಿಯೂ ಪರಮಾತ್ಮನೆ ವ್ಯಾಪ್ತನು, ಎಂಬ ಭಾವನೆಯಿಂದ ಕರ್ಮ ಮಾಡಿದರೆ ಅದು ಬಾಧಿಸದು,' ಎಂದು ಆಜೀವನ ಜ್ಞಾನಯುಕ್ತ ಕರ್ಮ ಮಾಡುವ ಉಪದೇಶವನ್ನು ಸಾರಿರುವದು. ಕ್ರಿಯಾವಾನ್ ಏಷ ಬ್ರಹ್ಮವಿದಾಂ ವರಿಷ್ಠಃ-'ಕ್ರಿಯಾವಂತನಾದ ಆತ್ಮಜ್ಞಾನಿಯೆ ಬ್ರಹ್ಮವಿದರಲ್ಲಿ ವರಿಷ್ಠನು,' ಎಂದು ಮುಂಡಕವು ಹೇಳುವದು. ಜನಕ, ಅಜಾತಶತ್ರು, ಮುಂತಾದವರು ಆತ್ಮಜ್ಞಾನಿಗಳಿದ್ದರೂ ತಮ್ಮ ರಾಜ್ಯನಡೆಸುವ ಕರ್ಮವನ್ನು ಮಾಡುತ್ತಲೆ ಇದ್ದರು. ವೇದಾಂತ ಸೂತ್ರಗಳಲ್ಲಿ ತುಲ್ಯಂ ತು ದರ್ಶನಮ್ (೩.೪.೯) ಈ ಸೂತ್ರವು ಎರಡೂ ಮಾರ್ಗಗಳ ಸಮಾನ ಯೋಗ್ಯತೆಯನ್ನು ವ್ಯಕ್ತ ಮಾಡುವದು. ಸ್ಮೃತ್ಯಾದಿಗಳಲ್ಲಿಯೂ ಕರ್ಮಯೋಗವೆಂಬ ಪ್ರತ್ಯೇಕ ಮಾರ್ಗವು ಉಕ್ತವಾಗಿದೆ. ಮನುಸ್ಮೃತಿಯು ಸನ್ಯಾಸಾಶ್ರಮದೊಡನೆಯೆ ಜನಕಾದಿಗಳು ಸೇವಿಸಿದ ಜ್ಞಾನಯುಕ್ತ ಕರ್ಮಯೋಗವನ್ನು ವರ್ಣಿಸಿದೆ; ಆರನೆಯ ಅಧ್ಯಾಯದಲ್ಲಿ ಸನ್ಯಾಸಧರ್ಮವನ್ನು ಹೇಳಿದ ಬಳಿಕ ವೇದಸನ್ಯಾಸಿಗಳ ಕರ್ಮಯೋಗದ ವರ್ಣನೆಯು ಬಂದಿದೆ. ಅದರಲ್ಲಿ, ಅನ್ಯ ಆಶ್ರಮಗಳಿಗಿಂತ ಗೃಹಸ್ಥಾಶ್ರಮವು ಶ್ರೇಷ್ಠವೆಂದು ಹೇಳಿ, ಸನ್ಯಾಸದ ಬದಲು ವಿಕಲ್ಪರೂಪವಾಗಿ ಗೃಹಸ್ಥಾಶ್ರಮದಲ್ಲಿಯೆ

ಇದ್ದು ಕರ್ಮಯೋಗವನ್ನು ಸೇವಿಸಬೇಕು ಎಂದು ವಿಧಿಸಲ್ಪಟ್ಟಿದೆ. ಇದೇ ಪರ್ವಕ್ಕೆ ಕಡೆಯ ಅಧ್ಯಾಯದಲ್ಲಿ 'ವೈದಿಕ ಕರ್ಮಯೋಗ' ಎಂಬ ಹೆಸರು ಕೊಡಲ್ಪಟ್ಟಿದೆ, ಮತ್ತು ಅದು ಸನ್ಯಾಸದಷ್ಟೆ ಶ್ರೇಯಸ್ಕರವೆಂದು ಹೇಳಿದೆ. ಯಾಜ್ಞವಲ್ಕ್ಯ ಸ್ಮೃತಿಯ ಎರಡನೆಯ ಅಧ್ಯಾಯದಲ್ಲಿ ಸನ್ಯಾಸ ಮತ್ತು ಕರ್ಮಯೋಗ ಇವೆರಡೂ ಸಮಾನ ಯೋಗ್ಯತೆಯುಳ್ಳವುಗಳೆಂದು ಉಲ್ಲೇಖವಿದೆ. ಮಹಾಭಾರತದಲ್ಲಿಯೂ ನಿವೃತ್ತಿ ಮತ್ತು ಪ್ರವೃತ್ತಿ ಇವು ಪ್ರತ್ಯೇಕ ಮಾರ್ಗಗಳೆಂದು ವರ್ಣನೆ ಇದೆ. ಪ್ರವೃತ್ತಿಪರಾಯಣ ನಾರಾಯಣೀಯ ಉಪಾಖ್ಯಾನದಲ್ಲಿ, ಸೃಷ್ಟಿಯ ಆರಂಭಕ್ಕೆ ಬ್ರಹ್ಮದೇವರ ಮಾನಸಪುತ್ರರಾದ ಮರೀಚಾದಿ ಏಳು ಜನರು ಕರ್ಮಮಾರ್ಗವನ್ನು ಮತ್ತು ಸನಕಾದಿ ಏಳು ಪುತ್ರರು ಸಾಂಖ್ಯಯೋಗವನ್ನು ಪ್ರವೃತ್ತ ಮಾಡಿದರು, ಎಂಬ ಕಥೆಯು ಹೇಳಲ್ಪಟ್ಟಿದೆ. ಸಾರಾಂಶವೇನಂದರೆ, ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಎರಡು ಮೋಕ್ಷಮಾರ್ಗಗಳು ಪ್ರತ್ಯೇಕ, ಸ್ವತಂತ್ರ, ಮತ್ತು ಪುರಾತನ ಇದ್ದು ಎರಡೂ ತುಲ್ಯಬಲವಿರುವವು.

### ೬೯ ಕರ್ಮಯೋಗದ ಶ್ರೇಷ್ಠತೆ

ಇನ್ನು ಇವೆರಡು ಸ್ವತಂತ್ರ ಮಾರ್ಗಗಳೆಂದು ಹೇಳಿ ಗೀತೆಯು, ಸ್ವಸ್ಥ ಕೂಡುವದೊ ಅಥವಾ ಇವುಗಳಲ್ಲಿ ಏನಾದರೂ ನ್ಯೂನಾಧಿಕ್ಯವನ್ನು ತೋರಿಸುವದೊ, ಇದನ್ನು ನೋಡುವ. ಗೀತೆಯು ಈ ಎರಡೂ ಸಾಧನಗಳನ್ನು ಹೋಲಿ

ಸುವದು, ಸನ್ಯಾಸಕ್ಕಿಂತ ಯೋಗವು ಹೆಚ್ಚಿನದೆಂದು ತೋರಿಸುವದು, ಮತ್ತು ಅನೇಕ ಸ್ಪಷ್ಟ ವಚನಗಳಿಂದ ಆಜೀವನ ಕರ್ಮಯೋಗವನ್ನೆ ಆಚರಿಸಬೇಕೆಂದು ಉಪದೇಶಿಸುವದು. ನಾಲ್ಕನೆಯ ಅಧ್ಯಾಯದ ಕೊನೆಗೆ ಯೋಗ ಮತ್ತು ಸನ್ಯಾಸ ಇವುಗಳ ವರ್ಣನೆಯು ಪೂರ್ಣವಾಗುವದು. ಆಗ ಅರ್ಜುನನು ಪುನಃ ಕರ್ಮಯೋಗ ಮತ್ತು ಕರ್ಮಸನ್ಯಾಸ ಇವುಗಳಲ್ಲಿ ಹೆಚ್ಚು ಶ್ರೇಯಸ್ಕರವಾವುದು, ಎಂದು ಪ್ರಶ್ನೆ ಮಾಡುವನು. ಅದಕ್ಕೆ ಉತ್ತರವೆಂದು, 'ಕರ್ಮಸನ್ಯಾಸಕ್ಕಿಂತ ಕರ್ಮಯೋಗವೆ ಹೆಚ್ಚಿನದು' (೮.೧–೨) ಎಂದು ಶ್ರೀಕೃಷ್ಣನು ಉತ್ತರ ಕೊಡುವನು. ತಸ್ಮಾದ್ಯೋಗಾಯ ಯುಜ್ಯಸ್ವ(೨.೫೦)'ಆದುದರಿಂದ ಯೋಗವನ್ನು ಆಶ್ರಯಿಸು;' ಮಾ ತೇ ಸಂಗೋಽಸ್ತ್ವ ಅಕರ್ಮಣಿ(೨.೪೭)'ಕರ್ಮಮಾಡದೆ ಇರುವಲ್ಲಿ (ಅಕರ್ಮದಲ್ಲಿ) ಅಂದರೆ ಕರ್ಮತ್ಯಾಗದಲ್ಲಿ, ಆಸಕ್ತನಾಗಬೇಡ;' ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ। ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ( ೩.೭ ) 'ಮನಸಿನಿಂದ ಇಂದ್ರಿಯಗಳನ್ನು ಸಂಯಮಿಸಿ ಕರ್ಮಯೋಗವನ್ನಾರಂಭಿಸುವವನ ಯೋಗ್ಯತೆಯು ಹೆಚ್ಚಿನದು;' ಕರ್ಮಜ್ಯಾಯೋ ಹ್ಯಕರ್ಮಣಃ (೩.೮) 'ಅಕರ್ಮಕ್ಕಿಂತ ಕರ್ಮವು ಶ್ರೇಷ್ಠವು;' ಕುರು ಕರ್ಮೈವ ತಸ್ಮಾತ್ತ್ವಮ್ (೪.೧೫) 'ಆದುದರಿಂದ ಕರ್ಮವನ್ನೆ ಮಾಡು;' ಯೋಗಮಾತಿಷ್ಠೋತ್ತಿಷ್ಠ (೪.೪೨) 'ಏಳು, ಕರ್ಮಯೋಗವನ್ನು ಆಚರಿಸು;' ಜ್ಞಾನಿಭ್ಯೋಽಪಿ ಮತೋಽಧಿಕಃ (೬.೪೬)

'ಸನ್ಯಾಸಕ್ಕಿಂತ ಕರ್ಮಯೋಗಿಯ ಯೋಗ್ಯತೆಯು ಹೆಚ್ಚಿನದು;' ತಸ್ಮಾದ್ಯೋಗೀ ಭವಾರ್ಜುನ (೬.೪೬) 'ಆದುದರಿಂದ ಅರ್ಜುನನೇ ಯೋಗಿಯಾಗು;' ಈ ಬಗೆಯಾಗಿ ಕರ್ಮಯೋಗದ ಶ್ರೇಷ್ಠತೆಯನ್ನು ಬಣ್ಣಿಸುವ ಅನೇಕ ವಚನಗಳು ಗೀತೆಯಲ್ಲಿ ಅಲ್ಲಲ್ಲಿ ಇರುವವು.

### ೨೦ ಮುಕ್ತ ಕರ್ಮವೆ ಸಿದ್ಧಿಯ ಒರೆಗಲ್ಲು

ಸನ್ಯಾಸ ಮತ್ತು ಯೋಗ ಇವುಗಳಲ್ಲಿ ಕರ್ಮಯೋಗವೆ ಶ್ರೇಷ್ಠವು, ಎಂದು ಗೀತೆಯ ಸ್ಪಷ್ಟ ಸಿದ್ಧಾಂತವಿರುವದೆಂಬುದನ್ನು ಇದುವರೆಗೆ ನೋಡಿದಂತಾಯಿತು. ಸಾಮಾನ್ಯ ತರ್ಕದಿಂದಲೂ ಇದೇ ಮಾತು ಸಿದ್ಧವಾಗುವದು. ಜನ್ಮಮರಣಗಳ ನಡುವಿನ ಇಡೀ ಕಾಲವೆಲ್ಲ, ಜನ್ಮಮರಣಗಳು ಸಹ ಕರ್ಮಮಯವಿರುವವು, ಎಂಬ ವ್ಯಾಪಕ ಅರ್ಥದಲ್ಲಿ ಕರ್ಮಶಬ್ದವು ಗೀತೆಯಲ್ಲಿ ಉಪಯೋಗಿಸಲ್ಪಟ್ಟಿರುವದು. ಜೀವನದ ಒಂದು ಪಲವು ಸಹ ಕರ್ಮರಹಿತವಿರಲಾರದು. ಜೀವನಕ್ಕೆ ಅವಶ್ಯವಾದ ಆಹಾರ ನಿದ್ರಾದಿ, ಶ್ವಾಸೋಚ್ಛ್ವಾಸಾದಿ ಅನೇಕ ಕರ್ಮಗಳನ್ನು ನಾವು ಎಷ್ಟು ಬಿಡಬೇಕೆಂದರೂ ಅವು ನಮ್ಮನ್ನು ಬಿಡಲಾರವು. ಅತ್ಯಂತವಿರಾಗಿಯಾದ ಸನ್ಯಾಸಿಯೇ ಇರಲಿ ಅಥವಾ ಜಡತನುವಾದ ಸೋಮಾರಿಯಿರಲಿ, ಶರೀರ ನಿರ್ವಾಹದ ಅವಶ್ಯ ಕರ್ಮಗಳು ಅವನನ್ನು ಬಿಡಲರಿಯುವು. ವ್ಯಕ್ತಿಯ ಜೀವನವು ಕರ್ಮಪೂರ್ಣವಿದ್ದಂತೆ ಈ ಜಗತ್ತಾದರೂ ಒಂದು ಅಖಂಡ ಕರ್ಮಚಕ್ರವೆ ಇದೆ. ಜಡವೆಂದು ತೋರುವ ಕಲ್ಲುಮಣ್ಣುಗಳ ಅಣುಪರಮಾಣುಗಳು ಸಹ

ಸತತ ಚಲಾಯಮಾನವಿರುವವು ಎಂಬುದು ಶಾಸ್ತ್ರಸಿದ್ಧ ಮಾತು. ಗತಿಶೀಲವಿರುವುದರಿಂದಲೆ ಸೃಷ್ಟಿಗೆ 'ಜಗತ್' ಎಂಬ ಹೆಸರು ಬಂದಿದೆ. ಇಂಥ ಕರ್ಮಭೂಮಿಯಲ್ಲಿ ಜನಿಸಿ ಕರ್ಮ ವನ್ನೆ ಬಿಟ್ಟು ಬಿಡುವ ಬಗೆ ಹೇಗೆ ? ಕರ್ಮವನ್ನು ಬಿಟ್ಟು ಹೋಗುವದಾದರೂ ಎಲ್ಲಿ ? ಹದಿನಾಲ್ಕು ಭುವನಗಳಲ್ಲಿ ಎಲ್ಲಿ ಹೋದರೂ ಕರ್ಮ ಬಿಡದು ! ಕರ್ಮತ್ಯಾಗವು ಸೃಷ್ಟಿನಿಯ ಮದ ವಿರುದ್ಧವಿರುವದು. ಈ ಹಟವನ್ನು ಹಿಡಿಯುವದೆಂದರೆ ನಗೆಗೀಡಾಡುಗುವುದೆ ಸೈ. ಸಂಸಾರತ್ಯಾಗ ಮಾಡಿ ಯಾವ ನೊಬ್ಬನು ಆತ್ಮೌಪಮ್ಯಭಾವನೆಯನ್ನು ಪಡೆದನೆಂದು ಒಂದೊ ಮ್ಮೆತ್ತು ತಿಳಿದರೂ ಅದರ ಪರಿಪಕ್ವತೆಯ ಪರೀಕ್ಷೆಯು ಈ ಸಂಸಾರದಲ್ಲಿಯೇ ಆಗಬೇಕಲ್ಲವೆ ? ಆತ್ಮೌಪಮ್ಯ ಬುದ್ಧಿ ಯನ್ನೇನು ಅಟ್ಟರಣ್ಯದಲ್ಲಿಯ ಗಿಡಗಂಟಿಗಳೊಡನೆ, ಮೃಗ ಪಕ್ಷಿಗಳೊಡನೆ ವ್ಯವಹರಿಸುವುದಕ್ಕಾಗಿ ದೊರಕಿಸತಕ್ಕದ್ದೋ ಅಥವಾ ಪರರ ಪರವೆ ಇಲ್ಲದೆ ಆಜೀವನ ತನ್ನಲ್ಲಿ ತಾನೇ ಸುಖದಿಂದ ಮತ್ತನಿರುವುದಕ್ಕಾಗಿ ಪಡೆಯತಕ್ಕದ್ದೋ ? ಮೊದಲನೆಯ ಉದ್ದೇಶವು ಕೇವಲ ಹಾಸ್ಯಾಸ್ಪದವು, ಎರಡನೆ ಯದು ಒಂದು ಬಗೆಯ ಕೇವಲ ನಿರುಪದ್ರವವಾದರೂ ನಿರ ರ್ಥಕ ಸ್ವಾರ್ಥವು. ಇವೆರಡೂ ಆತ್ಮೌಪಮ್ಯಬುದ್ಧಿಯನ್ನು ಪ್ರಾಪ್ತಮಾಡಿಕೊಳ್ಳುವ ನಿಜವಾದ ಉದ್ದೇಶಗಳಲ್ಲ. ಸ್ವಾರ್ಥ, ಅಹಮಹಮಿಕೆ, ರಾಗದ್ವೇಷ ಮುಂತಾದ ವಿಘಾತಕ ಭಾವನೆ ಗಳಿಂದ ಪ್ರೇರಿತರಾಗಿ ಕರ್ಮ ಮಾಡಿ ಜೀವನವನ್ನೆಲ್ಲ ವಿಷ ಮಯ ಮಾಡದೆ ಈ ನಿಷ್ಕಾಮ ಕರ್ಮವೆಂಬ ಅಮೃತವಲ್ಲಿ

ಯನ್ನು ಸೇವಿಸಿ ಮೈತ್ರಿ, ಕರುಣೆ, ಪರಸ್ಪರ ಕಲ್ಯಾಣಚಿಂತನ ಮುಂತಾದವುಗಳನ್ನು ಮಾನವೀ ಪ್ರಪಂಚದಲ್ಲಿ ನೆಲೆಗೊಳಿಸ ಬೇಕು, ಎಂಬುದೆ ಆತ್ಮೌಪಮ್ಯ ಬುದ್ಧಿಯನ್ನು ಉಪದೇಶಿ ಸುವ ಮೂಲ ಉದ್ದೇಶವು. ಆದುದರಿಂದ ಈ ಗುಣವನ್ನು ಪಡೆದವರು ಸಮಾಜದಲ್ಲಿದ್ದು ಸ್ವಕರ್ಮವನ್ನಾಚರಿಸುತ್ತಿದ್ದ ರೆಯೆ ಈ ಉದ್ದೇಶವು ಸಫಲವಾಗಬಲ್ಲದು. ಈಸುವವನ ಪರೀ ಕ್ಷೆಯು ನೀರಿನಲ್ಲಿಯೆ ಆಗುವಂತೆ ಸರ್ವಾತ್ಮಭಾವದ ಪರೀ ಕ್ಷೆಯು ವಿಭಕ್ತವೆಂದು ತೋರುವ ವ್ಯಕ್ತಿಗಳ ಸಮಾಜದಲ್ಲಿ ವ್ಯವಹರಿಸುವಾಗ ಸಮಭಾವವನ್ನನುಭವಿಸುತ್ತ ಆತ್ಮೌಪ ಮ್ಯತೆಯಿಂದ ಆಚರಿಸುವದರಿಂದಲೆ ಆಗಬಲ್ಲದು. ಜ್ಞಾನದ ಪರೀಕ್ಷೆಯು ಕರ್ಮಕ್ಷೇತ್ರದಲ್ಲಿಯೆ ಆಗುವದು. ಕರ್ಮ ಮಾಡುತ್ತಿದ್ದರೂ ಬುದ್ಧಿಯು ಸ್ಥಿರ ಉಳಿದರೆಯೆ ಸಮಚಿತ್ತತ್ವದ ಭಾವವು ಸಿದ್ಧವಾದಂತಾಯಿತು. ಈ ಬಗ್ಗೆ ಕಾಲಿದಾಸನ ಒಂದು ಉಕ್ತಿಯು ಜ್ಞಾನಿಗೆ ಚನ್ನಾಗಿ ಸಲ್ಲುವಂತಿದೆ. ವಿಕಾರ ಹೇತೌ ಸತಿ ವಿಕ್ರಿಯಂತೇ ಏಷಾಂ ನ ಚೇತಾಂಸಿ ತ ಏವ ಧೀರಾಃ । (ಕುಮಾರ ಸಂಭವ ೧.೫೯) 'ವಿಕಾರ ಕಾರಣಗಳು ಸನ್ನಿಧವಿದ್ದರೂ ವಿಕೃತಿ ಹೊಂದದಿರುವವರೇ ಧೀರರು.' ಈ ಚಿಕ್ಕ ವಾಕ್ಯದಲ್ಲಿ ಗಂಭೀರವಾದ ಅರ್ಥವು ತುಂಬಿದೆ. ಅರಣ್ಯ ದಲ್ಲಿ ವರ್ಷಾನುವರ್ಷ ತಪಾಚರಣೆ ಮಾಡಿ ಚಳಿಗಾಲದ ವೃಕ್ಷ ಗಳಂತೆ ಶುಷ್ಕ ಮತ್ತು ರುಕ್ಷರಾದ ಎಷ್ಟೋ ಋಷಿಮುನಿ ಗಳು 'ವಿಕಾರ ಹೇತು' ಉಂಟಾದೊಡನೆ ಒಂದು ಕ್ಷಣದಲ್ಲಿ ಚಲಿತರಾದುದನ್ನು ನಾವು ಪುರಾಣಾದಿಗಳಲ್ಲಿ ಓದಿರುವೆವು!

ಇದರ ಅರ್ಥವೇನಂದರೆ, ನಿಜವಾದ ಸಿದ್ಧಿಯು, ಅಚಲವಾದ ಸಿದ್ಧಿಯು, ವಿಕಾರಹೇತುಗಳಿದ್ದರೂ ವಿಕೃತ ಹೊಂದದ ಸಿದ್ಧಿಯು ಕರ್ಮವನ್ನಾಚರಿಸುತ್ತಿರುವಾಗಲೆ, ಕರ್ಮಯೋಗ ದಿಂದಲೆ ಪ್ರಾಪ್ತವಾಗಬಲ್ಲದು ಹೊರತು ನಿಷ್ಕ್ರಿಯರಾಗಿ ಕಟ್ಟೇಕಾಂತದಲ್ಲಿ ತಪಿಸುವದರಿಂದ ಸಾಧಿಸದು.

### ೭೧ ಕರ್ಮತ್ಯಾಗಿ ಮತ್ತು ಕರ್ಮಯೋಗಿ

ಕರ್ಮತ್ಯಾಗ ಮಾಡದೆ ಕರ್ಮಬಂಧವನ್ನು ಹರಿದು ಮುಕ್ತರಾಗಿ ಅತ್ಯಂತ ಆಂತರಿಕ ಸುಖವನ್ನು ಪಡೆಯುವ ಮಾರ್ಗವನ್ನು ಕರ್ಮಯೋಗವು ತೋರಿಸುವದು. ಬಂಧನವು ಸ್ಥೂಲ ಕರ್ಮದಿಂದ ಉಂಟಾಗದೆ ಕರ್ತನ ಮಮತ್ವ ಮತ್ತು ವ್ಯಕ್ತಿಗತ ಅಹಂಭಾವ ಇವುಗಳ ಮೂಲಕ ಹುಟ್ಟುವದು. ಆದುದರಿಂದ ಸಂಕುಚಿತ ಭಾವನೆಗಳು ನಷ್ಟವಾಗದೆ ಕರ್ಮ ಬಂಧವು ಅಳಿಯದು. ಭಾವನೆಯೆಂಬುದು ನಮ್ಮ ಅಂತರದಲ್ಲಿ ರುವುದು, ಅದನ್ನು ಮಾನಸಿಕ ಪ್ರಯತ್ನಗಳಿಂದ ಉಚ್ಚ ಮತ್ತು ನಿರ್ಮಲ ಮಾಡಬಹುದು;ಅದಕ್ಕಾಗಿ ಕರ್ಮತ್ಯಾಗದ ಅವಶ್ಯಕತೆ ಏನೂ ಇಲ್ಲ. ಕರ್ಮಯೋಗದಲ್ಲಿಯೂ ತ್ಯಾಗವು ಪ್ರಧಾನವು, ಅನಿವಾರ್ಯವು; ಆದರೆ ಅದು ಕರ್ಮದ ತ್ಯಾಗ ವಲ್ಲ, ಅದು ಫಲಾಶೆಯ ತ್ಯಾಗವು.ಕರ್ಮತ್ಯಾಗದಿಂದ ಯಾವು ದನ್ನು ದೊರಕಿಸಬೇಕೆಂದು ಕೆಲವರು ಹವಣಿಸುವರೊ ಅದೇ ಕರ್ಮಯೋಗದಿಂದ ಪ್ರಾಪ್ತವಾಗುವದು. ಕರ್ಮತ್ಯಾಗ ದಿಂದ ಸ್ವಕರ್ಮವು ಖಂಡಿಸಲ್ಪಡುವದು, ಸಮಾಜವ್ಯವಸ್ಥೆಯು ಕೆಡುವದು. ಮೇಲಾಗಿ ಕರ್ಮತ್ಯಾಗದಿಂದಾದ ಸಿದ್ಧಿಯು ಪರೀ

ಕ್ಷೆಯು ಪುನಃ ಸಮಾಜದಲ್ಲಿ ವರ್ತಿಸುವವರೆಗೆ ಆಗುವದಿಲ್ಲ. ಕರ್ಮಬಂಧದ ಕಾರಣವಾದ ಫಲಾಶೆಯ ತ್ಯಾಗವು, ಕಾಮನೆಯ ತ್ಯಾಗವು ಯೋಗದಲ್ಲಿ ಅವಶ್ಯವಿದ್ದಂತೆ ಕರ್ಮಸನ್ಯಾಸದಲ್ಲಿಯೂ ಅವಶ್ಯವಿರುವದು. ಇಲ್ಲದಿದ್ದರೆ ಆ ಸನ್ಯಾಸವು 'ಮಿಥ್ಯಾಚಾರ'ವೆನಿಸುವದು.ಹೀಗಿದ್ದ ಬಳಿಕ ಮತ್ತು ಪೂರ್ಣ ಕರ್ಮತ್ಯಾಗವು ಅಶಕ್ಯ ಹಾಗೂ ನಿಸರ್ಗವಿರುದ್ಧವಿರುವಾಗ ಸರ್ವಕರ್ಮಪರಿತ್ಯಾಗದ ಹಟದಿಂದ ಯಾರು ಏನನ್ನು ಸಾಧಿಸಬೇಕಾಗಿದೆ ? ಅದಕ್ಕಿಂತ ಸ್ವಕರ್ಮವನ್ನು ಅಖಂಡ ನಡೆಸಿ, ಸಮಾಜವ್ಯವಸ್ಥೆಗೆ ಯಾವ ಭಂಗವನ್ನೂ ತಾರದೆ, ಸ್ವಪರ ಹಿತವನ್ನು ಸಮವಾಗಿ ಸಾಧಿಸುವ ಕರ್ಮಯೋಗಿಯ ಮಾರ್ಗವೇ ವಿಹಿತವು, ಯೋಗ್ಯವು, ಮತ್ತು ಪೂರ್ಣವಲ್ಲವೆ ? ಬಾಹ್ಯತಃ ಕರ್ಮವು ಒಂದೇ ಕಂಡರೂ ಜ್ಞಾನಿಯ ಕರ್ಮಕ್ಕೂ ಅಜ್ಞಾನಿಯ ಕರ್ಮಕ್ಕೂ ಭೂಮ್ಯಾಕಾಶದಷ್ಟು ಅಂತರವಿರುವದು. ಅವರಿಬ್ಬರ ದೃಷ್ಟಿ-ಭಾವನೆಗಳಲ್ಲಿ ದೊಡ್ಡ ಭೇದವಿರುವದು. ಜ್ಞಾನಿಯ ಮನದಲ್ಲಿಯ 'ಸ್ವ'ತ್ವವು ಸುಟ್ಟು ಫಲಾಶೆಯ ಲವಲೇಶವೂ ಅವನಲ್ಲಿರುವುದಿಲ್ಲ. ಆದುದರಿಂದ ಸುಖದುಃಖಗಳ ಚಂಚಲ ಅಲೆದಾಟವು ಅವನನ್ನು ಪೀಡಿಸುವದಿಲ್ಲ. ಅವನಲ್ಲಿ ಆತ್ಮೌಪಮ್ಯತೆಯ ದಿವ್ಯಭಾವವು ನಟ್ಟು ಅವನ ಕಾರ್ಯಗಳೆಲ್ಲ ದಿವ್ಯಗಂಗೆಯಂತೆ ಪ್ರೇಮಪ್ರವಾಹವಾಗಿ ಹರಿಯುವವು.ಅಂತರಾರಾಮವನ್ನನುಭವಿಸುತ್ತ ಪೂರ್ಣ ಜೀವನರಸವನ್ನು ಭೋಗಿಸುತ್ತ ಅವನು ಸಮಾಜ ಹಿತಕರ್ತನೂ ಲೋಕಕ್ಕೆ ಮಾರ್ಗದರ್ಶಿಯೂ ಆಗಿ ವಿರಾಜಿಸುವನು.

## ೭೨ ಅನಾಸಕ್ತಿಯೆಂದರೇನು ?

ಕರ್ಮಮಾಡುವವನು ಫಲತ್ಯಾಗವನ್ನು ಹೇಗೆ ಮಾಡಬಲ್ಲನು, ಎಂದು ಕೆಲವರು ಕೇಳಬಹುದು. ಫಲತ್ಯಾಗವೆಂದರೆ ಫಲವನ್ನೆ ಬಿಟ್ಟುಬಿಡುವುದಲ್ಲ, ಅಥವಾ ಫಲಬರುವಂತೆ ಯತ್ನಿಸುವುದನ್ನೆ ಬಿಟ್ಟುಬಿಡುವುದಲ್ಲ. ಫಲತ್ಯಾಗವೆಂದರೆ ಫಲಾಶೆಯ ತ್ಯಾಗವು; ಪೂರ್ಣ ಫಲವು ಬರುವಂತೆ ಎಲ್ಲ ಯೋಜನೆ ಮಾಡಿ, ಶಕ್ಯವಿದ್ದಷ್ಟು ಪರಾಕಾಷ್ಠೆಯ ಪುರುಷಪ್ರಯತ್ನ ಮಾಡಿ, ಫಲದ ಬಗ್ಗೆ ನಿರಪೇಕ್ಷವಿರುವದು, ಆಸಕ್ತಿರಹಿತವಿರುವುದು. ಈ ಕರ್ಮದಿಂದ ನನಗೆ ಈ ಲಾಭವಾಗುವದು, ಎಂಬ ಮಮತ್ವವನ್ನು ಬಿಟ್ಟು, ಕರ್ಮದ ಯೋಗ್ಯಾಯೋಗ್ಯತೆಯನ್ನೂ ಅದರ ಸುಷ್ಟದುಷ್ಟ ಪರಿಣಾಮಗಳನ್ನೂ ವಿಚಾರಿಸಿ, ಫಲದ ವಿಷಯದಲ್ಲಿ ಅನಾಸಕ್ತನಿದ್ದು ಕೇವಲ ಕರ್ತವ್ಯಬುದ್ಧಿಯಿಂದ ಕರ್ಮದಲ್ಲಿ ಮಗ್ನನಾದವನು ಆ ಕರ್ಮದಿಂದ ಬದ್ಧನಾಗನು. 'ಕರ್ಮಫಲವು ನನ್ನ ಸ್ವಾಧೀನದಲ್ಲಿಲ್ಲ. ಸೃಷ್ಟಿಯ ಅನೇಕ ವ್ಯಾಪಾರಗಳ ಪರಿಣಾಮವು ನನ್ನ ಕರ್ಮದ ಮೇಲೆ ಆಗುವುದು. ಆ ಪರಿಣಾಮಗಳಲ್ಲಿ ಕೆಲವು ನನಗೆ ತಿಳಿಯುವವು ಕೆಲವು ತಿಳಿಯಲಾರವು (ತಿಳಿಯದಿರುವ ಶಕ್ತಿಗಳಿಗೆಯೆ ದೈವವೆಂಬ ಹೆಸರು). ಆದುದರಿಂದ ಯಾವುದರ ಮೇಲೆ ನನ್ನ ಅಧಿಕಾರವು ನಡೆಯದೊ ಅಂಥ ಪರಿಣಾಮಗಳ ಬಗ್ಗೆ ನಾನು ಮಮತ್ವವನ್ನು ತಾಳಿ ಏನು ಉಪಯೋಗ,' ಎಂದು ವಿಚಾರ ಮಾಡಿ,ಅವನು ತನ್ನ ಪ್ರಯತ್ನಗಳಲ್ಲಿಯೆ ಹೆಚ್ಚು ನಿಮಗ್ನನಿರುವನು. ಎಲ್ಲವೂ ಕರ್ಮನಿಯಮಕ್ಕನುಸರಿಸಿಯೇ ನಡೆಯುವ-

ದೆಂಬ ಕಟ್ಟಳೆಯಲ್ಲಿ ಪೂರ್ಣ ನಂಬಿಗೆಯುಳ್ಳವನಾದುದರಿಂದ ಯೋಗಿಯು ಕರ್ಮದ ನಿಯತನಿಯಮಗಳನ್ನು ಚನ್ನಾಗಿ ಅರಿತು ಅವುಗಳಂತೆ ಶಾಂತಚಿತ್ತದಿಂದ ವರ್ತಿಸುವ ಯತ್ನ ಮಾಡುವನು. ಕರ್ಮಫಲದ ಚಿಂತೆಮಾಡುತ್ತ ಕುಳಿತರೆ ಚಿಂತೆ ಮಾಡಿದ ಮಾತ್ರಕ್ಕೆ ಕಟ್ಟಳೆಯ ವಿರುದ್ಧ ಫಲವು ಕೈಸೇರದು; ನಮ್ಮ ಆತುರತೆಯ ಮೂಲಕ ಕರ್ಮವು ಮಾತ್ರ ಕೆಡುವದು, ಕರ್ಮಫಲವು ಕಲುಷಿತವಾಗುವದು, ಮತ್ತು ಇಷ್ಟಾನಿಷ್ಟ ಫಲಗಳ ಅಕಾಲಿಕ ಹಾಗೂ ಕಾಲ್ಪನಿಕ ಚಿತ್ರವು ಬುದ್ಧಿಯನ್ನು ಭ್ರಮಿಸುವದು. ಅದೇ ಅನಾಸಕ್ತರಾಗಿ ಕರ್ಮ ಮಾಡುವ ರೂಢಿಯಿಂದ ಬುದ್ಧಿಯು ಸಮ ಮತ್ತು ಸ್ಥಿರವಾಗಿ ಸರ್ವಾತ್ಮ ಭಾವದ ಅಂಕುರವು ಮೊಳೆತು ಅಂತಃಸುಖದ ರಮ್ಯ ಅನುಭವವು ಬರುವದು.

### ೭೩ ಕರ್ಮಯೋಗವು 'ಅರ್ಥವಾದ'ವಲ್ಲ

ಈ ರೀತಿ, ಗೀತೆಯ ವಿಷಯವಾದ ಕರ್ಮಯೋಗವು ಯುಕ್ತಿಯುಕ್ತವು, ವ್ಯಕ್ತಿಹಿತಸಾಧಕವು, ಸಮಾಜಸ್ಥಿತಿ ಸ್ಥಾಪಕವು, ಸನ್ಯಾಸಕ್ಕಿಂತ ಶ್ರೇಷ್ಠವು, ಎಂದು ಇದುವರೆಗೆ ಹೇಳಿದ್ದಾಯಿತು. ಆದರೆ ಗೀತೆಯು ಮಾಡಿದ ಯೋಗದ ಸ್ತುತಿಯು ಕೇವಲ ಅರ್ಥವಾದಾತ್ಮಕವೆಂದು ಹಲವರು ವಾದಿಸುವರು ! ಅರ್ಜುನನು ಅಜ್ಞಾನಿಯು, ಅವನನ್ನು ಕರ್ಮ ದಲ್ಲಿ ಪ್ರವೃತ್ತಮಾಡುವುದಕ್ಕಾಗಿ ಶ್ರೀಕೃಷ್ಣನು ಈ ಪರಿ ಯೋಗವನ್ನು ಹೊಗಳಿರುವನು, ಗೀತೆಯ ಮುಖ್ಯವಿಷಯವು

ಸನ್ಯಾಸವೆ ಇರುವದು, ಎಂದು ಸನ್ಯಾಸಮಾರ್ಗೀಯ ಟೀಕಾಕಾರರು ಅನ್ನುವರು. ಈ ಮಾತು ಎಳ್ಳಷ್ಟೂ ಸಮಂಜಸವಿಲ್ಲ. ಮೊದಲಿನಿಂದ ತುದಿಯವರೆಗೆ ಒಂದೇಒಂದು ಅಖಂಡ ಸೂತ್ರದಂತೆ ಇದ್ದ ಕರ್ಮಯೋಗವನ್ನು ಅರ್ಥವಾದವೆಂದು ಗೀತೆಯೊಳಗಿಂದ ತೆಗೆದುಹಾಕಿದರೆ ಗೀತೆಯು ಒಂದು ಮಹಾಗ್ರಂಥವೆನಿಸಿಕೊಳ್ಳದೆ ಕೇವಲ ಅಸಂಬದ್ಧ ಪ್ರಲಾಪವೆನಿಸುವದು; ಸುಳ್ಳೊಂದು ಸೊಟ್ಟೊಂದು ಹೇಳಿ, ಶರಣಾಗತನಾದ ಅರ್ಜುನನನ್ನು ಠಕ್ಕಿಸಿ, ಅವನಿಂದ ಕೊಲೆಗೆಲಸ ಮಾಡಿಸಲು ಕೃಷ್ಣನು ರಚಿಸಿದ ತರ್ಕವಿತರ್ಕಕುತರ್ಕಗಳ ಮೊಟ್ಟೆಯೆನಿಸುವದು. ಸಂವಾದದ ಕೊನೆಗೆ ಅರ್ಜುನನು ಸ್ವತಃ 'ನನ್ನ ಅಜ್ಞಾನವಳಿಯಿತು, ನಿನ್ನ ವಚನದಂತೆ ಮಾಡುವೆನು' (೧೮.೭೩) ಎಂದು ಹೇಳಿ ಯುದ್ಧದಲ್ಲಿ ಸ್ವೇಚ್ಛೆಯಿಂದ ಪ್ರವೃತ್ತನಾಗಿರುವನು. ಒಂದುವೇಳೆ ಅರ್ಜುನನು ಅಜ್ಞಾನಿಯಿದ್ದನೆಂದು ಕ್ಷಣಹೊತ್ತು ತಿಳಿದರೂ ಕರ್ಮಯೋಗದ ಶ್ರೇಷ್ಠತೆಯನ್ನು ತೋರಿಸುವಾಗ ಶ್ರೀಕೃಷ್ಣನು ಸ್ವತಃ ತನ್ನ ಮತ್ತು ಜನಕನ ಉದಾಹರಣೆಯನ್ನು ಕೊಟ್ಟಿರುವನು. ಅವರೂ ಅಜ್ಞಾನಿಗಳಿದ್ದರೆಂದು ಅನ್ನುವ ಧಾರ್ಷ್ಟ್ಯವು ಸನ್ಯಾಸ ಪಕ್ಷಪಾತಿಗಳಿಗೆ ಬರದಿರಲಿ, ಅಂದರೆ ನಾವು ಗೆದ್ದಂತಾಯಿತು !

### ೭೪ ಕರ್ಮವು ಎಲ್ಲರಿಗೂ ಅವಶ್ಯ

ಜ್ಞಾನಿ ಹಾಗೂಅಜ್ಞಾನಿ ಇವರಿಬ್ಬರಿಗೂ ಗೀತೆಯು ಕರ್ಮಯೋಗವನ್ನಾಚರಿಸುವ ಉಪದೇಶವನ್ನು ಮಾಡುವದು.

ಅಜ್ಞಾನಿಗಳಷ್ಟೇ ಚಿತ್ತಶುದ್ಧಿಯಾಗುವವರೆಗೆ ಮಾತ್ರ ಅಥವಾ ಜ್ಞಾನವಾಗುವವರೆಗೆ ಮಾತ್ರ ಕರ್ಮಯೋಗವನ್ನಾಚರಿಸ ಬೇಕೆಂದು ಸನ್ಯಾಸಮಾರ್ಗೀಯರಂತೆ ಗೀತೆಯ ಅಭಿಪ್ರಾಯ ವಿಲ್ಲ. ಇನ್ನು ಜ್ಞಾನಿಯು ಆಪ್ತಕಾಮನಾಗಿರುವುದರಿಂದ'ಸ್ವ' ಅರ್ಥವೆಂಬುದು ಅವನಿಗೇನೂ ಉಳಿದಿರುವುದಿಲ್ಲ. ಹೀಗಿದ್ದರೂ ಅವನು ಯಾರ ಸಲುವಾಗಿ ಮತ್ತು ಯಾವ ಉದ್ದೇಶದಿಂದ ಕರ್ಮಮಾಡಬೇಕು, ಎಂಬುದನ್ನು ಸ್ವಲ್ಪ ವಿಚಾರಿಸುವ. ಕರ್ಮವು ಆಹಾರನಿದ್ರಾದಿಗಳಂತೆ ದೇಹಧರ್ಮವಿರುವದು, ದೇಹತ್ಯಾಗದ ವಿನಾ ನಿಜವಾದ ಕರ್ಮತ್ಯಾಗವು ಸಂಭವಿಸದು, ಎಂದು ಅರಿತು ಜ್ಞಾನಿಯು ಕರ್ಮವನ್ನು ತಪ್ಪಿಸದೆ ಕರ್ಮ ಕ್ಷೇತ್ರದಲ್ಲಿಯೆ ಲೋಕಸಂಗ್ರಹಾರ್ಥವಾಗಿ ವಿಚರಿಸುವನು. ಆತ್ಮತೃಪ್ತನಿರುವುದರಿಂದ ಕರ್ಮಮಾಡಿ ಅಥವಾ ಬಿಟ್ಟು ಸ್ವಂತಕ್ಕಾಗಿ ಅವನು ಏನೂ ಗಳಿಸುವದಿರುವುದಿಲ್ಲ, ಆದುದ ರಿಂದ ಕರ್ಮಮಾಡದೆ ಇರುವ ಆಗ್ರಹವನ್ನು ಹಿಡಿಯದೆ ಅನಾ ಸಕ್ತಿಯಿಂದ ಅವನು ಕಾರ್ಯಕ್ರಮವನ್ನು ಮಾಡುವನು. ಜ್ಞಾನಿಯ ಜ್ಞಾನೋತ್ತರ ಕರ್ಮದ ಕಾರಣವನ್ನು ಹೇಳು-ವಾಗ ಶ್ರೀಕೃಷ್ಣನು ಅರ್ಜುನನಿಗೆ ಅನ್ನುವದೇನಂದರೆ, ಲೋಕ ಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ (೩.೨೦) 'ಲೋಕಸಂಗ್ರಹದ ವಿಚಾರವನ್ನಾದರೂ ಮಾಡಿ ನೀನು ಕರ್ಮ ಮಾಡಲಿಕ್ಕೆ ಬೇಕು.' ಇನ್ನು ಈ ಲೋಕಸಂಗ್ರಹವೆಂದರೇನು?

### ೭೫ ಜ್ಞಾನಿಯು ಕರ್ಮವನ್ನು ಮಾಡಲೇಬೇಕು

ಮನುಷ್ಯನು ಜ್ಞಾನಿಯಾದನೆಂದರೆ ಕರ್ಮಮಾಡುವ

ಕುಶಲತೆಯೂ ಅವನಲ್ಲಿ ಬಂದಂತೆಯೆ ಸೈ. ಯಾಕಂದರೆ ರಾಗ ದ್ವೇಷರಹಿತನಾಗಿ ಸಾಮ್ಯಬುದ್ಧಿಯಿಂದ ಕರ್ಮಮಾಡುವ ರೀತಿಯೆ ಕರ್ಮಕೌಶಲವೆನಿಸುವದು. ಕರ್ತನ ಆತ್ಮೌಪಮ್ಯ ಬುದ್ಧಿಯ ವಿಕಾಸವು ಆಗುತ್ತಹೋದಂತೆ ಅವನ ಕರ್ಮದಲ್ಲಿಯ ಸ್ವಾರ್ಥವು ಲೋಪ ಹೊಂದುತ್ತ ನಡೆಯುವದು, ಅವನ ಹಮ್ಮು ಅಳಿಯುವದು, ಜಗತ್ತು ಬೇರೆ ತಾನು ಬೇರೆ ಎಂಬ ಭಾವವಳಿದು ಅವನು ಜಗನ್ಮಯನಾಗುವನು. ಕೈಕಾಲುಗಳು ತಮ್ಮ ಸ್ವಂತ ಹಿತಕ್ಕಾಗಿ ಪ್ರವರ್ತಿಸದೆ ದೇಹ ರಕ್ಷಣಾರ್ಥ ವಾಗಿ ಪ್ರವರ್ತಿಸುವಂತೆ ಸಮಾಜದ ಅಂಗನಾದ ಜ್ಞಾನಿಯೂ ಸಮಾಜಧಾರಣೆಗಾಗಿ ಪ್ರವರ್ತಿಸುವನು. ಅವನು ಮಾಡುವ ಕಾರ್ಯವು ಸಣ್ಣದಿರಲಿ ದೊಡ್ಡದಿರಲಿ, ತನ್ನ ಸಾಮರ್ಥ್ಯ ಮತ್ತು ಪರಿಸ್ಥಿತಿಯಂತೆ ಅಥವಾ ಅಧಿಕಾರದಂತೆ ಅವನು ಕಸ ಗೂಡಿಸುತ್ತಿರಲಿ ಇಲ್ಲವೆ ಸಾಮ್ರಾಜ್ಯಶಕಟವನ್ನು ನಡೆಸುತ್ತಿ ರಲಿ, ಅವನ ಆ ಕಾರ್ಯವು ಆತ್ಮೌಪಮ್ಯಭಾವದಿಂದ ಜನಿಸಿ ಅದರ ಆಧಾರದಿಂದಲೆ ಜರಗುವದು. ಅವನ ಕರ್ಮವನ್ನು ನಿರೀಕ್ಷಿಸುವವನು ಅವನ ವೃತ್ತಿಯನ್ನು ಪರೀಕ್ಷಿಸ ಬಹುದು ಮತ್ತು ಅದರಿಂದ ಕರ್ಮಯೋಗದ ಪಾಠವನ್ನು ಕಲಿಯಬಹುದು. ಜ್ಞಾನಿಯು ತನ್ನ ಸದ್ವರ್ತನದ ಮೂಲಕ ಜಗತ್ತನ್ನು ಉನ್ಮಾರ್ಗದಿಂದ ನಿವರ್ತಿಸಿ ಸನ್ಮಾರ್ಗದಲ್ಲಿ ಪ್ರವರ್ತಿಸುವನು ಮತ್ತು ಈ ರೀತಿ ಲೋಕಸಂಗ್ರಹಕ್ಕೆ ಕಾರಣನಾಗುವನು. ಹೀಗೆ ಸಮಾಜದ ಸ್ಥಿತಿ ಮತ್ತು ಪ್ರಗತಿ, ಲೋಕದ ಶಾಂತಿ, ಪುಷ್ಟಿ, ತುಷ್ಟಿ, ಇವುಗಳನ್ನು ಸಾಧಿಸುವ

ದಕ್ಕಾಗಿ ಜ್ಞಾನಿಯು ತನ್ನ ಶಕ್ತಿಯ ಉಪಯೋಗ ಮಾಡದೆ, 'ನಾನು ಜ್ಞಾನಿಯಾಗಿರುವೆನು, ಇನ್ನು ಈ ನಶ್ವರ ಜಗತ್ತಿನ ಮತ್ತು ಈ ಮೂಢ ಜನರ ಸಂಬಂಧವೇಕೆ,' ಎಂದು ಅನ್ನುತ್ತ ಸತತ ಧ್ಯಾನಮಗ್ನನಾಗಿ ಕುಳಿತರೆ ಅದು ನಿಜವಾದ ಜ್ಞಾನ ವಲ್ಲ, ಅದು ಕೇವಲ ಜ್ಞಾನದ ಆಭಾಸಮಾತ್ರವು, ಎಂದು ಅನ್ನಬೇಕಾಗುತ್ತಿದೆ. ಕರ್ಮಕುಶಲತೆಯ ಉಪಯೋಗವನ್ನು ಮಾಡದೆ ಅದರ ಪರೀಕ್ಷೆಯಾಗಲಾರದು. ಮನುಷ್ಯನು ಹೆಚ್ಚು ಜ್ಞಾನವಂತನಾದಂತೆ ಅವನಲ್ಲಿ ಕರ್ಮಕೌಶಲವು ಹೆಚ್ಚು ಬೆಳೆ ಯುವದು. ಪೂರ್ಣಜ್ಞಾನಿಯು ಪೂರ್ಣಕರ್ಮಕುಶಲನು. ಕರ್ಮಬಾಧೆಯಿಂದ ಅಲಿಪ್ತನಿದ್ದು ಸ್ವಕರ್ಮವನ್ನು ಮಾಡಲು ಪೂರ್ಣಶಕ್ತನು. ಹೀಗೆ ಪೂರ್ಣಜ್ಞಾನಿಯಾದವನು ಕರ್ಮ ವನ್ನು ಬಿಡುವದು ನ್ಯಾಯುವೂ ಅಲ್ಲ ಯೋಗ್ಯವೂ ಅಲ್ಲ. ಆಯು ರ್ವೇದದಂಥ ಯಾವದೊಂದು ವಿದ್ಯೆಯನ್ನು ಕಲಿಯುತ್ತಿರು ವವನು ಅದರಲ್ಲಿ ಪಾರಂಗತನಾದೊಡನೆ ಅದನ್ನು ಬಿಟ್ಟು ಸ್ವಸ್ಥ ಕುಳಿತರೆ ಲೋಕವು ನಗುವದೇ ಹೊರತು ಅವನನ್ನು ಸ್ತುತಿಸ ಲಾರದು. ಕರ್ಮಕುಶಲತೆಯನ್ನು ಪಡೆದ ಜ್ಞಾನಿಯು ಕರ್ಮ ಬಿಟ್ಟು ಏಕಾಂತದಲ್ಲಿ ಲೀನನಾಗಲುಜ್ಜುಗಿಸಿದರೆ, ಅವನಿಗೆ ಇದೇ ನ್ಯಾಯವು ಅನ್ವಯಿಸಿ ಜನರು ನಗುವರು. ಜ್ಞಾನಿಯ ಯೋಗ್ಯತೆಯು ದೊಡ್ಡದು, ಅವನು ಪ್ರತಿಷ್ಠಿತನು. ಅವನು ಜಗತ್ತಿಗೆ ಮಾರ್ಗದರ್ಶಿಯಾಗದೆ ಕರ್ಮತ್ಯಾಗ ಮಾಡಿ ಕುಳಿತರೆ ಆಲಸ್ಯಕ್ಕೆ ಉತ್ತೇಜನವು ದೊರೆಯುವದು, ಜನರಲ್ಲಿ ಬುದ್ಧಿಭೇದವುಂಟಾಗುವದು ಮತ್ತು ದಂಭವು ಬೆಳೆಯುವದು.

ಜ್ಞಾನಿಯಾದರೂ ಆ ವ್ಯಕ್ತಿಯು ಸಮಾಜದ ಒಂದು ಅಂಗ ವಿದ್ದುದು ಸುಳ್ಳಾಗಲಾರದು, ಸಮಾಜಧಾರಣೆಗಾಗಿ ಮಾಡ ತಕ್ಕ ಕರ್ಮವು ದೇಹಧರ್ಮದಂತೆ ಅವನನ್ನು ಬಿಡಲರಿಯದು, ಮತ್ತು ತನ್ನ ಪಾಲಿನ ಕರ್ಮದ ತ್ಯಾಗ ಮಾಡಿ ಸಮಾಜದಲ್ಲಿ ಅವ್ಯವಸ್ಥೆಯನ್ನುಂಟು ಮಾಡುವ ಅಧಿಕಾರವು ಅವನಿಗೆ ದೊರಕಲಾರದು. ಭಗವಂತನು ಪೂರ್ಣಜ್ಞಾನಿಯಿದ್ದರೂ ಜಗತ್ತಿನಲ್ಲಿ ಸಾಧುರಕ್ಷಣೆ, ದುಷ್ಟದಮನ, ಧರ್ಮಸಂಸ್ಥಾಪನ ಈ ಕಾರ್ಯಗಳಿಗಾಗಿ ಜನ್ಮತಾಳುವನು, ಎಂದು ಗೀತಾವಚನ ವಿರುವದು. ಅವನು ಹಾಕಿಕೊಟ್ಟ ಮೇಲುಪಂಕ್ತಿಗೆ ವಿರುದ್ಧ ವಾದ ಕರ್ಮತ್ಯಾಗದ ಸಮಾಜವಿಧ್ವಂಸಕ ಮಾರ್ಗವನ್ನು ಅನುಸರಿಸಲು ಮಿಕ್ಕ ಜ್ಞಾನಿಗಳಾದರೂ ಏಕೆ ಹವಣಿಸಬೇಕು? 'ಮೂರು ಲೋಕಗಳಲ್ಲಿ ನನ್ನ ಕರ್ತವ್ಯಕರ್ಮವೆಂಬುದೇನೂ ಉಳಿದಿಲ್ಲ; ನಾನು ಪ್ರಾಪ್ತಮಾಡಿಕೊಳ್ಳತಕ್ಕ ವಸ್ತುವೆಂಬುದು ಯಾವುದೂ ಇಲ್ಲ; ಆದರೂ ನಾನು ಕರ್ಮ ಮಾಡುತ್ತಲೇ ಇರುವೆನು. ಯಾಕಂದರೆ ನಾನು ಅತಂದ್ರಿತನಾಗಿ ಕರ್ಮ ಮಾಡದೆ ಇದ್ದರೆ ಜನರು ನನ್ನನ್ನು ಅನುಕರಿಸುವರು, ಲೋಕದ ನಾಶವಾಗುವದು, ಮತ್ತು ಎಲ್ಲೆಲ್ಲಿಯೂ ಅವ್ಯವಸ್ಥೆಯುಂಟಾ ಗುವದು. ಆದುದರಿಂದ ಜ್ಞಾನಿಯು ಲೋಕಸಂಗ್ರಹಾರ್ಥ ವಾಗಿ ಕರ್ಮವನ್ನು ಮಾಡಲಿಕ್ಕೇ ಬೇಕು,' ಎಂಬ ಸಾರಭೂತ ವಾದ ಸ್ಪಷ್ಟವಚನದಿಂದ ತನ್ನ ದಿವ್ಯದೃಷ್ಟಾಂತವನ್ನೆ ಕೊಟ್ಟು ಶ್ರೀಕೃಷ್ಣನು ಅರ್ಜುನನ ಕರ್ಮತ್ಯಾಗರೂಪ ಮೋಹ ತಿಮಿರವನ್ನು ನಾಶಗೊಳಿಸಿ, ಜ್ಞಾನಿಯಾಗಿ ನಿಷ್ಕಾಮ ಕರ್ಮ ಮಾಡುವ ಪ್ರೇರಣೆಯನ್ನು ಮಾಡಿರುವನು.

## ೭೬ ಸ್ವಕರ್ಮವು

ಕರ್ಮವನ್ನು ಮಾಡುವ ಅಧಿಕಾರದ ದೃಷ್ಟಿಯಿಂದ ಕರ್ಮ ಪರಾಯಣತೆಯನ್ನು ವಿಚಾರಿಸಿದರೂ ಕರ್ಮದ ಮಹತ್ವವೆ ಒಡೆದು ಕಾಣುವದು. ಯಾವದಧಿಕಾರಮವಸ್ಥಿತಿರಧಿಕಾರಿ ಣಾಮ್(ವೇದಾಂತಸೂತ್ರ ೩.೩. ೩೨)'ಎಲ್ಲಿಯವರೆಗೆ ಯಾವನ ಅಧಿಕಾರವೊ ಅಲ್ಲಿಯವರೆಗೆ ಅಧಿಕಾರಿಯು ಆಯಾ ಅಧಿಕಾರ ದಲ್ಲಿ ವರ್ತಿಸತಕ್ಕದ್ದು;' ಇದರ ಅರ್ಥವೇನಂದರೆ, ಅಧಿಕಾರವು ಪೂರೈಸುವವರೆಗೆ ಅಧಿಕಾರಿಯು ಸ್ವಕರ್ಮದಲ್ಲಿ ನಿರತನಿರಲೇ ಬೇಕು. ಯಾವನಿಗೆ ಯಾವ ಕರ್ಮವನ್ನು ಮಾಡುವ ಅಧಿ ಕಾರವಿರುವದೊ ಅವನು ಅದನ್ನು ಆಜೀವನ ಮಾಡಬೇಕು, ಎಂಬುದೆ ಅವನ ಧರ್ಮವಾಗುವದು. ನಮ್ಮ ಜನ್ಮದೊಡನೆ ಆದ ಕರ್ಮಾರಂಭವು ಮರಣದವರೆಗೆ ನಿಲ್ಲದು; ಜನ್ಮತಃ ಉತ್ಪನ್ನವಾದ ಕರ್ಮದ ಅಧಿಕಾರವು ಮರಣದವರೆಗೆ ನಷ್ಟ ವಾಗದು. ಕರ್ಮದ ಈ ಮೂಲತತ್ವವನ್ನು ಒಪ್ಪಿ ಮನುಷ್ಯನು ಕರ್ಮವನ್ನಾರಂಭಿಸಿದರೆ ತಾನು ಯಾವ ಪ್ರಕಾರದ ಕರ್ಮ ವನ್ನು ಮಾಡಬೇಕು, ಎಂಬ ಪ್ರಶ್ನೆಯು ಎದುರಾಗುವದು. ಈ ಪ್ರಶ್ನೆಗೂ ಅಧಿಕಾರ ತತ್ವವು ಸರಲ ಉತ್ತರವನ್ನು ಕೊಡು ವದು. ವಿವಿಧವ್ಯಕ್ತಿಗಳ ಕಾಯಿಕ, ವಾಚಿಕ, ಮಾನಸಿಕ, ಶಕ್ತಿ ಗಳು ಭಿನ್ನವಿರುವುದರಿಂದ ಎಲ್ಲರೂ ಎಲ್ಲಬಗೆಯ ಕರ್ಮಗಳನ್ನು ಮಾಡಲರಿಯರು. ಅವರವರ ಶಕ್ತಿ ಮತ್ತು ಪರಿಸ್ಥಿತಿಯಿಂದ ಅವರವರ ಕರ್ಮ ಮತ್ತು ಅದರ ಮರ್ಯಾದೆಯು ನಿಶ್ಚಿತ ವಾಗುವದು; ಅವನ್ನು ತಿಳುಕೊಂಡು ವರ್ತಿಸುವ ಮನುಷ್ಯನ

ಕರ್ಮವು 'ಸಹಜ' ಅಥವಾ 'ಸ್ವಭಾವಜ' ಎನಿಸುವದು, ಅದೇ ಅವನ ಸ್ವಕರ್ಮವು. ಅಂಥ ಕರ್ಮದ ತ್ಯಾಗವು ಅವಿಹಿತವು. ಅದನ್ನು ಅವಗಣಿಸುವದರಿಂದ ಅಯೋಗ್ಯವರ್ತನೆ ಮಾಡಿದಂತಾಗುವದು. ಸ್ವಕರ್ಮವನ್ನು ಮಾಡಲೇಬೇಕು, ಎಂಬ ಹಿತಕರ ಧೋರಣದಿಂದ ಮನುಷ್ಯನು ಕರ್ಮಮಾಡಿದರೆ, ಅದರೊಡನೆ ಕಾಮ್ಯಬುದ್ಧಿಯನ್ನು ಸಂಯಮಿಸುತ್ತ ಹೋದರೆ, ಸಾಮ್ಯಬುದ್ಧಿಯು ಅಳವಡುವದು. ಆ ಸಮಸ್ಥಿತಿಯಲ್ಲಿದ್ದು ಆತ್ಮೌಪಮ್ಯಭಾವನೆಯ ಆನಂದದಲ್ಲಿ ರಮಮಾಣನಾದರೂ ಅವನು ಮೊದಲಿನಂತೆ ಕರ್ಮಮಾಡಬಲ್ಲನು. ಮೊದಲಿನ ಮತ್ತು ಈಗಿನ ಕರ್ಮದಲ್ಲಿ ಭೇದವೇನಂದರೆ, ಮೊದಲು ಅವನ ದೃಷ್ಟಿಯು 'ಸ್ವ'ರತವಿತ್ತು, ಈಗ ಅದು 'ಸರ್ವಭೂತಹಿತ'ರತವಿರುವದು, ಮೊದಲು ಅವನು ಫಲಾಸಕ್ತಿಯಿಂದ ಮಾಡುತ್ತಿದ್ದನು ಈಗ ಅನಾಸಕ್ತಿಯಿಂದ ಮಾಡುವನು. ಕರ್ಮದಲ್ಲಿ ಅವನು ಸದಾ ಲೀನನಿದ್ದರೂ ಅದರೊಡನೆ ಅವನ ಭಾವನಾವಿಕಾಸವೂ ಆಗಿ, ಆತ್ಮಜ್ಞಾನದ ಪ್ರಕಾಶವು ತೀವ್ರವೇ ಅಂತರಂಗದಲ್ಲಿ ಬೆಳಗುವದು ಮತ್ತು ಅವನು ಅಂತಃಸುಖವನ್ನು ಪಡೆಯುವನು. ಆದರೆ ಜ್ಞಾನಪೂರ್ವದಲ್ಲಿದ್ದ ಕರ್ಮಾಧಿಕಾರವೆ ಜ್ಞಾನೋತ್ತರವೂ ಅವನಿಗಿರುವದು. ಇಷ್ಟೇ ಅಲ್ಲ, ಅವನು ಜ್ಞಾನಪಡೆದ ಮೂಲಕ ಸ್ವಕರ್ಮ ಮಾಡಲು ಸಹಸ್ರಪಾಲು ಹೆಚ್ಚು ಯೋಗ್ಯನಾಗುವನು. ಮಹಾಭಾರತದಲ್ಲಿಯ ತುಲಾಧಾರನ ಕಥೆಯು ಇದೇ ಕರ್ಮಮರ್ಮವನ್ನು ಒಳಕೊಂಡಿರುವದು.

### ೨೨ ಸನ್ಯಾಸ ಮಾರ್ಗದ ಉತ್ಪತ್ತಿ–ಅದರ ಹೀನತೆ

ಈ ಮೇಲಿನ ವಿವೇಚನದಿಂದ ಅನಾಸಕ್ತ ಕರ್ಮವು

ಜೀವನಸರ್ವಸ್ವವನ್ನು ವ್ಯಾಪಿಸಿರುವುದೇ ಯೋಗ್ಯವು ಎಂಬುದು ಸಿದ್ಧವಾಯಿತು. ಇನ್ನು ಸನ್ಯಾಸಕ್ಕೆ ಆಶ್ರಮ ವ್ಯವಸ್ಥೆಯಲ್ಲಿ ಯಾವ ಕಾರಣದಿಂದ ಸ್ಥಾನವು ದೊರಕಿತು, ಎಂಬುದನ್ನು ನೋಡಿದರೆ ಕರ್ಮಯೋಗದ ಅನುಪಮತೆಯು ಮತ್ತಿಷ್ಟು ಸ್ಫುಟವಾಗುವದು. ಯಾವುದಕ್ಕೆ ವೈದಿಕಕಾಲ ವೆನ್ನುವರೊ ಆ ಪ್ರಾಚೀನ ಯುಗದಲ್ಲಿ ಕೇವಲ 'ಭೋಗೈಶ್ವರ್ಯ' ಪ್ರಾಪ್ತಿಗಾಗಿ ಯಜ್ಞಯಾಗರೂಪ ದೇವತಾರಾಧನೆ ಮಾಡುವ ಕರ್ಮಕಾಂಡವು ಪ್ರಚಾರ ಹೊಂದಿತು. ಅದರ ಮಹತ್ವವೂ ವಿಸ್ತಾರವೂ ಬೆಳೆಯುತ್ತ ಹೋಗಿ ಅದರಲ್ಲಿಯೆ ಸದ್ಧರ್ಮ ತೊಡಗಿರುವದು ಸನ್ಮಾನಿತವಾಯಿತು. ಬಾಹ್ಯ ಕರ್ಮಾಡಂಬರದಲ್ಲಿಯೆ ಹೀಗೆ ಜನರು ಸಿಲುಕುವದರಿಂದ ಅಂತರ್ವಿಕಾಸಕ್ಕೆ ಅಡ್ಡಿ ಬರಲಾರಂಭಿಸಿತು, ಭಾವನಾಜನಿತ ಶಾಂತಿಗೆ ಎಡೆಯಿಲ್ಲದಂತಾಯಿತು, ಈ ಅರ್ಥರಹಿತ ಕರ್ಮ ದಾಸ್ಯವು ಶ್ರೇಷ್ಠರಿಗೆ ಬೇಸರಾಯಿತು. ಕರ್ಮಕಾಂಡದ ಈ ವರ್ಚಸ್ಸನ್ನು ಪ್ರತಿಕರಿಸುವದಕ್ಕಾಗಿ ಕರ್ಮತ್ಯಾಗ ಮಾಡಿ ಏಕಾಂತವಾಸದಲ್ಲಿ ತಪಧ್ಯಾನಾದಿಗಳಿಂದ ಆತ್ಮಭಾವನೆಯನ್ನು ಸಿದ್ಧಪಡಿಸಬೇಕೆಂದು ಈ ಶ್ರೇಷ್ಠರು, ಧೀರರು,ಜ್ಞಾನಮಾರ್ಗ ವನ್ನು ಆರಂಭಿಸಿದರು. ಈ ಉಪಕ್ರಮದಿಂದ ಕರ್ಮಕಾಂಡದ ಪಗರಣನಡೆಗಿತು, ಆದರೆ ಇಲಿಗೆ ಹೊಡೆಯಲಿಕ್ಕೆ ಹೋದಾಗ ಗಣಪತಿಗೆ ಪೆಟ್ಟು ಬಿತ್ತು, ಎಂಬಂತೆ ಅರ್ಥಶೂನ್ಯವಾದ ಯಾಂತ್ರಿಕ ಕರ್ಮಚಕ್ರದಿಂದ ಮತ್ತು ಕಾಮ್ಯಬುದ್ಧಿಯಿಂದ ಜನರನ್ನು ಬಿಡಿಸಹೋಗಿ ತ್ಯಾಗಪ್ರಧಾನ ಸನ್ಯಾಸ ಮಾರ್ಗ

ದವರು ಅರ್ಥಪೂರ್ಣ, ಆವಶ್ಯಕ, ಸದ್ಭಾವಪ್ರೇರಿತ, ಸಮಾಜ
ಧಾರಕ, ನಿಷ್ಕಾಮ ಕರ್ಮಗಳನ್ನೂ ಅಲ್ಲಗಳೆದರು. ಆತ್ಮತೃಪ್ತಿ
ಗಾಗಿ, ವೈಯ್ಯಕ್ತಿಕ ಆಂತರಿಕ ಸುಖಕ್ಕಾಗಿ, ಸಂಸಾರವನ್ನು
ತ್ಯಜಿಸುವ ಮತ್ತು ಸಮಾಜಧಾರಣೆಯ ಹಿತಕರ ಕಾರ್ಯ
ವನ್ನು ಸಹ ದುರ್ಲಕ್ಷಿಸುವ ಪದ್ಧತಿಗೆ ಮಾನ್ಯತೆಯು ದೊರಕ
ಲಾರಂಭಿಸಿತು.ಈ ರೀತಿ ಪೂರ್ಣವಿರಕ್ತಿ, ಔದಾಸಿನ್ಯ,ಸಮಾಜದ
ಬಗ್ಗೆ ತಿರಸ್ಕಾರ ಈ ಭಾವನೆಗಳಿಂದ ಕೂಡಿದ ಸನ್ಯಾಸವು
ಸಮಾಜದ ಆದರ್ಶವಾಯಿತು. ಕರ್ಮದ ಕತ್ತರಿಯೊಳಗಿಂದ
ಪಾರಾಗುವ ಹಾದಿಯೆಂದು ಸನ್ಯಾಸವು ಕಲ್ಪಿಸಲ್ಪಟ್ಟಿದ್ದರೂ
ಅದೇ ಸಮಾಜಕ್ಕೆ ಘಾತಕವಾಗಿ ಅದನ್ನೆ ಪ್ರತಿಭಟಿಸುವ
ಪ್ರಸಂಗವು ಪ್ರಾಪ್ತವಾಯಿತು. ಮನುಸ್ಮೃತಿಯಲ್ಲಿ ಸನ್ಯಾಸ
ಧರ್ಮವು ಉಚ್ಚವೆಂದು ಹೇಳಲ್ಪಟ್ಟಿದ್ದರೂ ಗೃಹಸ್ಥಾಶ್ರಮವು
ಎಲ್ಲ ಆಶ್ರಮಗಳಿಗೆ ಪೋಷಕವು, ಅದು ಸಾಗರದಂತೆ ವಿಶಾ
ಲವು ಮತ್ತು ಸರ್ವಾಶ್ರಯವು, ಅದು ಸನ್ಯಾಸಾಶ್ರಮದಷ್ಟೆ
ಶ್ರೇಷ್ಠವು, ಎಂದು ಹೊಗಳಲ್ಪಟ್ಟಿದೆ. ಪರಿಪಕ್ವವಾದ ಉತ್ತರ
ವಯಸ್ಸಿನವರು ಮಿಕ್ಕ ಮೂರು ಆಶ್ರಮಗಳ ಕರ್ತವ್ಯಗಳನ್ನು
ಯಥಾಸಾಂಗ ಪೂರ್ತಿಗೊಳಿಸಿದ ಬಳಿಕ ಸನ್ಯಾಸವನ್ನು ಸ್ವೀಕರಿ
ಸಬೇಕು, ಎಂದು ಆ ಆಶ್ರಮಕ್ಕೆ ಮೇರೆ ಕಟ್ಟಲು ಮನು
ಮುನಿಯು ಯತ್ನಿಸಿರುವನು. ಜನಕರಾಜನಂಥ ಜ್ಞಾನಿಯು
ಕರ್ಮತ್ಯಾಗದ ಭಯಸ್ಥಾನವನ್ನು ಗೊತ್ತುಹಚ್ಚಿ ಕರ್ಮರತ
ನಿರುವಾಗಲೆ ಆತ್ಮಜ್ಞಾನವನ್ನು ದೊರಕಿಸುವ ದಾರಿಯನ್ನು
ಜಗತ್ತಿಗೆ ತೋರಿಸಿ ಜ್ಞಾನಕರ್ಮಸಮುಚ್ಚಯ ಮಾರ್ಗವು

ಶಕ್ಯವು ಎಂಬುದನ್ನು ತನ್ನ ಚಾರಿತ್ರ್ಯದಿಂದಲೆ ಎಲ್ಲರಿಗೂ ಸಿದ್ಧ ಪಡಿಸಿದನು. ಹೀಗಿದ್ದರೂ ಸನ್ಯಾಸವೃತ್ತಿಯು ಮೇಲಿಂದ ಮೇಲೆ ತನ್ನ ಪುರಸ್ಕರ್ತರ ಪ್ರಭಾವಪ್ರತಾಪಗಳ ಮೂಲಕ ನಮ್ಮ ಇತಿಹಾಸದಲ್ಲಿ ತನ್ನ ಬಲವನ್ನು ತೋರಿಸುತ್ತ ಬಂದಿರು ವದು.ಅದರಿಂದ ಜನರ ಜೀವನದೃಷ್ಟಿಯಲ್ಲಿಯೆ ಒಂದು ಬಗೆಯ ಬದಲು ಆಗಿರುವದು. ಆ ಕಾರಣದಿಂದ ಜನಕನ ಜ್ಞಾನಕರ್ಮ ಸಮುಚ್ಚಯ ಮಾರ್ಗವು ಮುಂದೆ ಮಲಿನವಾದರೂ ಅದನ್ನೆ ಶ್ರೀಕೃಷ್ಣನು ಉದ್ಧರಿಸಿದನು ಮತ್ತು ವಾಸುದೇವ ಭಕ್ತಿಯ ಸೊಗಸಾದ ತತ್ವವನ್ನು ಅದರೊಡನೆ ಬೆರಿಸಿ ಭಾಗ ವತ ಧರ್ಮವನ್ನು ಪ್ರಸ್ಥಾಪಿಸಿದನು. ಹೀಗೆ ಎರಡೂ ಮಾರ್ಗ ಗಳು ರೂಢವಾದವು ಮತ್ತು 'ಸ್ಮಾರ್ತ' ಹಾಗೂ 'ಭಾಗವತ' ಎಂಬ ಹೆಸರುಗಳನ್ನು ಪಡೆದವು. ಜೀವನದ ಪೂರ್ವಾವಸ್ಥೆ ಯಲ್ಲಿ ಕರ್ಮಮಾಡಿ ಉತ್ತರಾವಸ್ಥೆಯಲ್ಲಿ ಕರ್ಮತ್ಯಾಗರೂಪ ಸನ್ಯಾಸವನ್ನಾಶ್ರಯಿಸುವದು ಸ್ಮಾರ್ತಧರ್ಮವೆನಿಸಿತು.ಜೀವ ನಾರಂಭದಿಂದ ಜೀವನಾಂತದ ವರೆಗೆ ಜ್ಞಾನಪ್ರಾಪ್ತಿಯು ಮುಂಚೆ ಮತ್ತು ಜ್ಞಾನವಾದ ಬಳಿಕ ಪರಮೇಶ್ವರಾರ್ಪಣ ಪೂರ್ವಕ ಕರ್ಮಮಾಡುವದು ಭಾಗವತ ಧರ್ಮವೆನಿಸಿತು. ಈ ರೀತಿ ಸ್ಮೃತ್ಯುಕ್ತ ಆಶ್ರಮವ್ಯವಸ್ಥೆಯಲ್ಲಿ ಸನ್ಯಾಸಕ್ಕೆ ಸ್ಥಾನವು ದೊರಕಿತು. ಆದರೂ ವಿಕಲ್ಪವಾಗಿ 'ವೇದಸನ್ಯಾಸ' ಅಥವಾ 'ನಿವೃತ್ತಕರ್ಮ,' ಎಂಬ ಹೆಸರಿನಿಂದ ನಿಷ್ಕಾಮ ಕರ್ಮಯೋಗವು ಅಸ್ತಿತ್ವದಲ್ಲಿತ್ತು. ಸ್ಮೃತಿಕಾರರು ಉತ್ತರಾ ವಸ್ಥೆಯ ಪೂರ್ತಿಯೆ ಸನ್ಯಾಸಾಧಿಕಾರವನ್ನಿಟ್ಟು ಅದರ ವಿಕಲ್ಪ

ವೆಂದು ಕರ್ಮಯೋಗದ ಪ್ರತಿಪಾದನೆ ಮಾಡಿ ಸನ್ಯಾಸಕ್ಷೇತ್ರ ವನ್ನು ಸಂಕುಚಿತ ಮಾಡಲು ಯತ್ನಿಸಿದರು. ಹೀಗಿದ್ದರೂ ಆದರ್ಶದಂತೆ ಜನತೆಯ ಒಲವು ಮತ್ತು ವರ್ತನ ಇವು ಆಗು ವವು, ಎಂಬ ನಿಯಮವು ಅಬಾಧಿತವು. ಕರ್ಮತ್ಯಾಗವು ಶ್ರೇಷ್ಠ ಎಂದು ಒಮ್ಮೆ ತಿಳಿವಳಿಕೆಯಾದರೆ ಕರ್ಮದ ಬಗ್ಗೆ ಜನರ ಆದರವು ಕಡಿಮೆಯಾಗುವದು. ಅವರಿಗೆ ಕರ್ಮದ ಬೇಸರ ವುಂಟಾಗುವದು, ಅವರಲ್ಲಿ ನಿರುತ್ಸಾಹವು ಪಸರಿಸುವದು ಮತ್ತು ಕರ್ಮವನ್ನು ಹೀಯಾಳಿಸುವ ಪ್ರವೃತ್ತಿಯಾಗು ವದು. ಕರ್ಮಕ್ಷೇತ್ರದಲ್ಲಿಯೆ ಆತ್ಮಸುಖವನ್ನು ಪಡೆಯ ತಕ್ಕದ್ದು, ಎಂಬ ವಿಚಾರವು ದೃಢಮೂಲವಿಲ್ಲದಿದ್ದರೆ ಕರ್ಮ ಮಾಡುತ್ತಿರುವಾಗ ಅಂತಃಕರಣದ ವಿಕಾಸವಾಗದು, ದಂಭ ವಿಷಾದಾದಿಗಳು ಮನಸಿನಲ್ಲಿ ಮನೆಮಾಡುವವು ಮತ್ತು ಇತ್ತ ಕರ್ಮವನ್ನು ಬಿಡಲಾರದೆ ಅತ್ತ ಅಂತಃಸುಖವನ್ನು ಪ್ರಾಪ್ತ ಮಾಡಿಕೊಳ್ಳಲಾರದೆ ಅತೋಭ್ರಷ್ಟಸ್ತತೋ ಭ್ರಷ್ಟಃ ಎಂಬಂತೆ ಆಗುವದು. ವಿಶಿಷ್ಟ ಸಿದ್ಧಿಯನ್ನು ಪಡೆಯುವದಕ್ಕಾಗಿ ಕಲ್ಪಿ ಸಲ್ಪಟ್ಟ ಸನ್ಯಾಸವನ್ನು ಆದರ್ಶವೆಂದು ಇಟ್ಟುಕೊಳ್ಳುವದರಲ್ಲಿ ಮೇಲಿನಂತೆ ಅನೇಕ ಭಯಸ್ಥಾನಗಳಿರುವವು. ಆದರೆ ಕರ್ಮ ಯೋಗವು ನಿರ್ಭಯವಿರುವದು. ಈ ಮಾರ್ಗದ ಅನುಪಮ ತೆಯು ಸಹಜವಿರುವದು; ಇದನ್ನು ಜೀವನಾದರ್ಶ ಮಾಡುವ ದರಲ್ಲಿ ಸ್ವಹಿತವಿರುವದು, ಲೋಕಹಿತವಿರುವದು, ಮತ್ತು ಈಶ್ವರನಿರ್ಮಿತ ನಿಯಮಗಳ ಸಾದರ ಸತ್ಕಾರವಿರುವದು.

# ೧೦ ಸಮದರ್ಶಿಯ ನಡತೆಯು

## ೨೮ ಗೀತೋಕ್ತ ಸಿದ್ಧನು

ಗೀತೆಯ ದೃಷ್ಟಿಯಿಂದ ಕರ್ಮಸನ್ಯಾಸಕ್ಕಿಂತ ಕರ್ಮ ಯೋಗವೆ ಯಾವಾಗಲೂ ಶ್ರೇಷ್ಠವಿರುವದು, ತರ್ಕದೃಷ್ಟಿ ಮತ್ತು ಲೋಕಹಿತದೃಷ್ಟಿ ಇವಾದರೂ ಗೀತೆಯ ಮಾತನ್ನೆ ಪೋಷಿಸುವವು, ಎಂಬುದನ್ನು ಹೋದ ಪ್ರಕರಣದಲ್ಲಿ ನೋಡಿ ದೆವು. ಇನ್ನು ಗೀತೋಕ್ತ ಸಿದ್ಧಪುರುಷನು ಯಾವ ರೀತಿ ಇರುವನು ಮತ್ತು ವ್ಯವಹರಿಸುವನು ಇದನ್ನು ನೋಡುವ. ಮನುಷ್ಯನು ನಿಷ್ಕಾಮ ಕರ್ಮಯೋಗದ ನಿರ್ಭಯ ಪಂಥ ದಿಂದ ಸಾಗುವಾಗ ಆತ್ಮೌಪಮ್ಯಬುದ್ಧಿಯನ್ನು ಪಡೆಯು ವನು, ಅಂತರಂಗದಲ್ಲಿ ಅಖಂಡ ಸುಖವನ್ನನುಭವಿಸುವನು, ಸಮಾಜದಲ್ಲಿ ತನ್ನ ಅಧಿಕಾರದ ಪ್ರಕಾರ ಲೋಕಸಂಗ್ರಹಾರ್ಥ ಕರ್ಮಮಾಡುವನು ಮತ್ತು ಕೃತಕೃತ್ಯನೆನಿಸುವನು. ಇಂಥ ಪುರುಷನು ಸಿದ್ಧನು ಮತ್ತು ಸಮದರ್ಶಿಯು ಎಂದು ಎನಿಸು ವನು. ಇಂಥವನಿಗೆ ಸ್ಥಿತಪ್ರಜ್ಞ, ಭಕ್ತ, ಗುಣಾತೀತ, ಬ್ರಹ್ಮ ಭೂತ ಎಂಬ ಮುಂತಾದ ಬಿರುದುಗಳನ್ನು ಕೊಟ್ಟು ಗೀತೆಯು ಅವನ ಗುಣಗಾನವನ್ನು ಮಾಡುವದು,ಅವನು ನಿಂತ ನಿಲವಿಗೆ ಬ್ರಾಹ್ಮಿ ಸ್ಥಿತಿ ಎನ್ನುವದು, ಹಾಗೂ ಅದನ್ನು ದೊರಕಿಸುವು ದರಲ್ಲಿ ಜೀವನಪೂರ್ತಿಯು ಇರುವದೆಂದು ಪ್ರತಿಪಾದಿಸು ವದು. ಗೀತೆಯ ಪ್ರಾಜ್ಞನು ಅಥವಾ ಭಕ್ತನು ಕರ್ಮಯೋಗಿ

ಯಿರುವನು; ಅವನು ತನ್ನ ವ್ಯವಹಾರದಕ್ಷತೆಯಿಂದ ಜನರನ್ನು ಪ್ರೇರಿಸುವನು ಮತ್ತು ಜನಜೀವನಕ್ಕೆ ಧೃತಿ-ಉತ್ಸಾಹಗಳನ್ನು ಪೂರೈಸುವನು. ಅವನ ನಿರ್ಮಲ ಹಾಗೂ ವೀರ ಚರಿತವು ಕರ್ಮಯೋಗದ ಅನುಪಮತೆ, ಸಹಜತೆ, ಮತ್ತು ಸರಲತೆಯನ್ನು ವ್ಯಕ್ತಗೊಳಿಸುವದು.

### ೭೯ ಸಿದ್ಧನ ಶುದ್ಧ ಕರ್ಮವು

ಮನುಷ್ಯನ ಭಾವನೆಯಂತೆ ಅವನಿಂದ ಕರ್ಮವಾಗುವದು, ಅವರವರ ಕ್ರತುವಿನಂತೆ ನಿಶ್ಚಯದಂತೆ ಕೃತಿಯು ಆಗುವದು. ಕರ್ಮಯೋಗಿಯು ಆತ್ಮೌಪಮ್ಯಭಾವನೆಯಿಂದ ಓತಪ್ರೋತನು. 'ಸರ್ವಭೂತಗಳಲ್ಲಿ ತನ್ನನ್ನು ಮತ್ತು ತನ್ನಲ್ಲಿ ಸರ್ವಭೂತಗಳನ್ನು' (೬.೨೯), ಅದೇ ರೀತಿ ಎಲ್ಲೆಲ್ಲಿಯೂ ಒಂದೇ ಒಂದು ಆತ್ಮಭಾವವನ್ನು ಅವನು ಅನುಭವಿಸುವನು. ಆವನು ಯಾವಾಗಲೂ ಸಮದೃಷ್ಟಿಯಿಂದ ನೋಡುವನು ಮತ್ತು ವಿಚಾರಿಸುವನು. ಅವನ ಅಂತರದಲ್ಲಿ ತನ್ನ ಮತ್ತು ಪರರ ಎಂಬ ಭೇದವು ತಲೆದೋರುವದಿಲ್ಲ; ಎಲ್ಲರನ್ನು ಸಮಭಾವದಿಂದ ಅವನು ನೋಡುವನು. ಅವನ ನಿಶ್ಚಯಾತ್ಮಕ ಬುದ್ಧಿಯು ಸಮಭಾವದಿಂದ ಪ್ರೇರಿತವಿರುವುದರಿಂದ ಅವನ ನಿರ್ಣಯಗಳೂ ಸಮತ್ವಪೂರ್ಣವಿರುವವು. ಸಾಮ್ಯಬುದ್ಧಿಯಿಂದ ನಿಶ್ಚಿತವಾದ ಕರ್ಮವು ಭೇದಬುದ್ಧಿರಹಿತವೂ ಹಿತಕರವೂ ಆಗುವದು ಕ್ರಮಪ್ರಾಪ್ತವು. ಸ್ವಾರ್ಥರಹಿತ ಸಿದ್ಧನ ಕರ್ಮವು ಸಮಾಜಧಾರಣೆಯನ್ನು ಮುಂದರಿಸುವದು,ಲೋಕಸಂಗ್ರಹವು ಸಿದ್ಧನ ಸಹಜ ಸ್ವಭಾವವಾಗುವದು. ಯಾರಿಗೂ

ಬ್ಬರಿಗೆ ದುಃಖ ಕೊಡುವ ಅಥವಾ ಯಾರೊಬ್ಬರ ಸುಖವನ್ನು ಕೊಳ್ಳುವ ಕಲ್ಪನೆಯು ಸಹ ಅವನ ಮನಸಿನಲ್ಲಿ ಬಾರದು. 'ತನ್ನಂತೆ ಪರರ ಬಗೆಯುವ' ಭಾವವು ಅವನ ತ್ರಿಕರಣಗಳಲ್ಲಿ ಭೇದಿಸಿದ್ದರಿಂದ ಅವನ ಅಭೇದಭಾವವು ವಿಶ್ವವ್ಯಾಪಿಯಾಗಿ ಅವನು ವಸುಧೈವ ಕುಟುಂಬಕನೆ ಆಗುವನು.

### ೮೦ ಕರ್ಮಯೋಗಿಯ ಸಮದರ್ಶಿತ್ವವು

ಸಮದರ್ಶಿಯಾದ ಕರ್ಮಯೋಗಿಯು ಸಂಸಾರದಲ್ಲಿದ್ದು ಸಂಸಾರ ಕರ್ಮಗಳನ್ನು ಮಾಡುವನು. ಆದುದರಿಂದ ವಿವಿಧ ಜನರ ಸಹವಾಸವು ಅವನಿಗೆ ಆಗುವದು. ಆದರೆ ಅವನಲ್ಲಿ ವಿಷಮತೆ ಅಥವಾ ನಿರ್ದಯತೆ ಇವು ಕಂಡು ಬರಲಾರವು. ದೇಶ, ಕಾಲ, ಪಾತ್ರಗಳನ್ನು ಚನ್ನಾಗಿ ವಿಚಾರಿಸಿ ಅವನು ಯೋಗ್ಯವಾದ ಕರ್ಮವನ್ನೆ ಮಾಡುವನು. ಹೀಗೆ ವಿಚಾರ ಮಾಡುವಾಗ ಅವನು ರಾಗದ್ವೇಷ ಮತ್ತು ಅಹಂಕಾರ ಇವು ಗಳಿಂದ ಮುಕ್ತನಿರುವನು. ಅವನ ಕರ್ಮವು ಮುಳ್ಳಿನಂತೆ ಯಾರಿಗೂ ಚುಚ್ಚುವದಿಲ್ಲ; ಜಗತ್ತಿನಲ್ಲಿಯ ದುಷ್ಟತೆ ಕ್ಲಿಷ್ಟತೆ ಯೊಡನೆ ಹೋರಾಡುವ ಪ್ರಸಂಗವು ಅವನಿಗೆ ಬರುವದು. ದುಷ್ಟತನವೆಂಬುದು ಅನೇಕ ಜನರ ಅಂತರಂಗದಲ್ಲಿ ಮನೆ ಮಾಡಿಕೊಂಡಿರುವುದರಿಂದ ಆ ದುಷ್ಟ ಜನರನ್ನು ವಿರೋಧಿಸು ವದು ಅವನ ಪಾಲಿಗೆ ಬರುವದು. ಆಗ ಅವನು ಆ ದುಷ್ಟ ಭಾವನೆಯನ್ನು ನಿರ್ಮೂಲ ಮಾಡಲೆತ್ನಿಸುವನು, ಆದರೆ ಆ ಜನರೊಡನೆ ನಿರ್ವೈರವೃತ್ತಿಯಿಂದ ಆಚರಿಸುವನು. ಅವನು ದುಷ್ಟತನದ ವೈರಿಯು ಹೊರತು ದುಷ್ಟರ ವೈರಿಯಲ್ಲ. ಅವನು

ಸಹಕಾರ ಮಾಡಲಿ ಅಥವಾ ಪ್ರತಿಕಾರ ಮಾಡಲಿ, ಅವನ ಆತ್ಮಭಾವ ಮತ್ತು ಸಮಬುದ್ಧಿ ಇವು ಎರಡರಲ್ಲಿಯೂ ಅಷ್ಟೇ ನಿಚ್ಚಳವಾಗಿ ವ್ಯಕ್ತವಾಗುವವು.

### ೮೧ ಕರ್ಮಯೋಗಿಯ ಭಾವನೆ ಮತ್ತು ಕರ್ಮ

ಏಕಾಕಿ ಇದ್ದವನಿಗೆ, ಯಾರೂ ಇಲ್ಲದಲ್ಲಿ ಒಂಟಿಗನಾಗಿ ರುವವನಿಗೆ ಹಿಂಸೆಯ ಅಥವಾ ಅಸತ್ಯದ ಪ್ರಸಂಗಗಳು ಬಾರದೆ ಇರುವಂತೆ ಎಲ್ಲೆಲ್ಲಿಯೂ ತನ್ನ ಅಸ್ತಿತ್ವವನ್ನೆ ಅನುಭವಿಸುವ ಆತ್ಮಭಾವಿಯು ಸಮಾಜದಲ್ಲಿದ್ದರೂ ಅವನಲ್ಲ ಹಿಂಸೆ ಅಸತ್ಯಾದಿ ವೃತ್ತಿಗಳು ಉಂಟಾಗಲಾರವು. ಎಲ್ಲಿ ಭೇದಭಾವವಿರುವುದೊ ಅಲ್ಲಿ ಹಿಂಸೆ ಅಸತ್ಯಾದಿ ಕಲುಷಿತ ವೃತ್ತಿಗಳು ಹುಟ್ಟುವವು; ಎಲ್ಲಿ ಅಭೇದಭಾವವು ನೆಲೆಸಿರುವದೊ ಅಲ್ಲಿ ಯಾರು ಯಾರನ್ನು ಹಿಂಸಿಸಬೇಕು, ಯಾರು ಯಾರಿಗೆ ಸುಳ್ಳು ಹೇಳಬೇಕು? ಅಂಥ ವನಲ್ಲಿ ಆತ್ಮಭಾವವನ್ನು ಪ್ರಕಟ ಮಾಡುವ ಭಾವನೆಗಳೆ ಉದ್ಭವಿಸುವವು. ಆದುದರಿಂದಲೆ ಸಮದರ್ಶಿ ಇದ್ದವರಲ್ಲಿ ಅಹಿಂಸೆ, ಸತ್ಯ, ಪ್ರೇಮ ಕರುಣೆ ಮುಂತಾದ ಶ್ರೇಷ್ಠ ಭಾವನೆ ಗಳು ಸಹಜವಾಗಿ ಕಂಡು ಬರುವವು ಮತ್ತು ಸಮಾಜ ಧಾರ ಣೆಗೆ ಆಧಾರಭೂತವಾಗುವವು. ಇನ್ನು ಇವು ಏನೆಂದರೂ ಭಾವನೆಗಳೇ ಇರುವವು ಹಾಗೂ ಅವ್ಯಕ್ತವಿರುವವು. ಅವು ವ್ಯವಹಾರದಲ್ಲಿ ವ್ಯಕ್ತವಾಗುವಾಗ ನಾಮರೂಪಗಳನ್ನು ಧರಿ ಸುವವು ಹಾಗೂ ಮರ್ಯಾದಿತವಾಗುವವು. ಸಮದರ್ಶಿಯ ಪ್ರತ್ಯಕ್ಷ ಆಚರಣದಲ್ಲಿ ಈ ಭಾವನೆಗಳು ಪ್ರಸಂಗಾನುಸಾರ ವಾಗಿ ವಿವಿಧರೂಪಗಳನ್ನು ಹೊಂದುವವು. ಅವುಗಳಲ್ಲಿ ಹಲವು

ಸಾಮಾನ್ಯ ಜನರಿಗೆ ಸಹಜ ತಿಳಿಯಬಹುದು, ಸೂಕ್ಷ್ಮವಿವೇಕ ದಿಂದ ತಿಳಿಯಬಹುದು. ಆದರೆ ಹಲವು ವಿವೇಕಕ್ಕೂ ತಿಳಿಯು ಲಿಕ್ಕಿಲ್ಲ. ಹೀಗಿದ್ದರೂ ಸಮದರ್ಶಿಯ ಮನದಲ್ಲಿ ಸ್ವಾರ್ಥದ ಲವಲೇಶವೂ ಇಲ್ಲದ್ದರಿಂದ ಅವನ ಪೂರ್ತಿ ಆಯಾ ಕರ್ಮವು ನಿರ್ದೋಷವೆ ಇರುವದೆಂಬಲ್ಲಿ ಸಂಶಯವಿಲ್ಲ. ಕದಾಚಿತ್ ಸಾಮಾನ್ಯ ವ್ಯವಹಾರದಲ್ಲಿ ಅಂಥ ಹಲವು ಕಾರ್ಯಗಳಿಗೆ ಅಪವಾದಗಳೆಂಬ ಹೆಸರು ಬರಬಹುದು. ಸಮದರ್ಶಿಗೆ ಬರುವ ಪ್ರಸಂಗಗಳು ಯಾವಾಗಲೂ ಎಲ್ಲರ ಸಮಕ್ಷವೆ ಬರಬೇಕೆಂದು ನಿಯಮವಿಲ್ಲ. ಅಂಥ ಪ್ರಸಂಗಗಳಲ್ಲಿ ಅವನು ಮಾಡುವ ವರ್ತನವು ಯಾವಾಗಲೂ ಸರ್ವಮಾನ್ಯವಾದೀತೆಂದೂ ಹೇಳ ಲಿಕ್ಕೆ ಬರುವದಿಲ್ಲ. ಹೀಗೆ ಕೆಲವೊಂದು ವೇಳೆ ಆದ ಅವನ ಕರ್ಮವು ಅಪವಾದಾತ್ಮಕವಿದ್ದು ಮೂಲ ತತ್ವದಂತೆ ಅಬಾಧಿತ ವಿರಲಾರದು. ಸಮದರ್ಶಿಯು ತನ್ನ ನಿರಪವಾದ ಶುದ್ಧ ಭಾವನೆ ಗಳಿಗೆ ಯಾವ ಪ್ರಸಂಗದಲ್ಲಿ ಎಂಥ ಹೊಸ ಹೊಸ ರೂಪವನ್ನು ಕೊಡುವನು ಮತ್ತು ಯಾವ ಪ್ರಕಾರದ ಮರ್ಯಾದೆಗಳನ್ನು ಕಲ್ಪಿಸುವನು ಇದನ್ನು ಯಾರು ಹೇಳಬಲ್ಲರು ? ಅವನ ಅಂತರ ದಲ್ಲಿ ಅಮಲ ಭಾವನೆಗಳು ಸದೈವ ಪ್ರಕಾಶಿಸುವವು. ಸಮಯಸೂಚಿತಸ್ಫುರಣದಿಂದ ಆ ಭಾವನೆಗಳಿಗೆ ವಿವಿಧ ಕಾರ್ಯರೂಪವು ಬರುವದು, ಆ ಬಾಹ್ಯರೂಪಗಳನ್ನು ನೋಡುವ ಜನರು ತಮ್ಮ ತಮ್ಮ ಆಕಲನ ಶಕ್ತಿಯ ಮಟ್ಟಿಗೆ ಅವುಗಳ ಸ್ವೀಕರಣವನ್ನು ಅಥವಾ ನಿರಾಕರಣವನ್ನು ಮಾಡು ವರು, ಅವುಗಳನ್ನು ಸತ್ಕರಿಸುವರು ಇಲ್ಲವೆ ತಿರಸ್ಕರಿಸುವರು.

### ೮೨ ಕರ್ಮಯೋಗಿಯು ನವಮಾರ್ಗದರ್ಶಿಯು

ಸಿದ್ಧಪುರುಷನು ಹೇಯಭಾವದಿಂದ ಸಮಾಜವನ್ನು ತ್ಯಜಿಸನು ಅಥವಾ ಜುಗುಪ್ಸೆಯಿಂದ ಅದನ್ನು ದೂರಮಾಡನು. ಅವನು ನಿರ್ವೈರನು, ಪರಮಕಾರುಣಿಕನು, ಮಾನವರ ಮಿತ್ರನು. ಅವನು ಜನರ ಆಕರ್ಷಣ ಸ್ಥಾನನು,ಅವನ ವಚನ ವರ್ತನಗಳನ್ನರಿತು ಅನುಕರಿಸಲು ಅವರು ಯಾವಾಗಲೂ ಉತ್ಸುಕರು, ತತ್ಪರರು. ಅವನ ಆಚಾರವೆ ಶಿಷ್ಟಾಚಾರವೆನಿಸುವದು ಮತ್ತು ಅದರಿಂದಲೆ ವಿಧಿನಿಷೇಧಗಳ ಮರ್ಯಾದೆಯು ನಿರ್ಣಯವಾಗುವದು. ಅವನ ಆತ್ಮನಿಷ್ಠ ಬುದ್ಧಿಯಿಂದೊಗೆದ ಪ್ರೇರಣೆಗಳೆ ದೇಶಕಾಲಾನುಸಾರವಾಗಿ ಸಮಾಜಧಾರಣೆಯ ನವಶಾಸನಗಳನ್ನು ವಿಧಿಸಿ ಪುರಾತನ ಮಾರ್ಗಗಳನ್ನು ಅಲ್ಲಗಳೆಯುವವು. ಅವನ ಅಂತರದಲ್ಲಿರುವ ಆತ್ಮಭಾವನೆ ಮತ್ತು ವ್ಯವಹಾರದಲ್ಲಿ ತೋರುವ ಸರ್ವಭೂತ ಹಿತರತತ್ವ ಇವು ಧರ್ಮದ ಆತ್ಮಾ ಮತ್ತು ದೇಹ ಅಥವಾ ಅಂತರಂಗ ಬಹಿರಂಗಗಳಾಗಿ ಪರಿಣಮಿಸುವವು. ಅವನ ಕರ್ಮಕ್ಷೇತ್ರವೆಲ್ಲ ಧರ್ಮಾರಣ್ಯವೆ ಎನಿಸುವದು ಮತ್ತು ಅವನು ನಿತ್ಯನವ ಸಂಸ್ಕಾರ ಸೇಚನದಿಂದ ಧರ್ಮವೃಕ್ಷವನ್ನು ಸುದೃಢ ಮತ್ತು ನವಪಲ್ಲವಿತವಾಗಿಡುವನು. ಅವನು ತಾನು ಧರ್ಮಾಮೃತದ ನಿರ್ಮಲ ನಿರ್ಝರನಾಗಿ ಕಂಗೊಳಿಸುವನು.

### ೮೩ ಸಾಮ್ಯಬುದ್ಧಿಯೆ ನಿಷ್ಪಾಪ ಕರ್ಮದ ಬೀಜವು

ಈ ರೀತಿ ಧರ್ಮವು ಗ್ರಂಥಸ್ಥವಿಲ್ಲ, ಅದು ಅಂತಸ್ಥವಿರುವದು. ಗ್ರಂಥಸ್ಥವಾಗಿ ತೋರುವ ಧರ್ಮವು ರಾಗ

ದ್ವೇಷರಹಿತ ಸತ್ಪುರುಷನ ಅಂತಃಸಾಕ್ಷಾತ್ಕಾರದ ಮತ್ತು ತದನುರೂಪ ಅವನು ಮಾಡುವ ಬಾಹ್ಯ ಆಚರಣೆಯು ನೀರೂಪಣೆ ಮಾತ್ರ ಇರುವದು, ಹೊರತು ಆ ಧರ್ಮದ ಪೂರ್ಣ ಸ್ವರೂಪವಲ್ಲ. ಅದು ಅವನಿಂದ ಜನಿತವು ಹೊರತು ಅವನು ಅದರಿಂದ ಮರ್ಯಾದಿತನಲ್ಲ. ಧರ್ಮದ ನಿಜಸ್ವರೂಪವನ್ನು ಪಡೆಯಲು ನಾವು ಸಾಮ್ಯಬುದ್ಧಿಯನ್ನೆ ಆಶ್ರಯಿಸಬೇಕಾಗುತ್ತಿದೆ. 'ಯಾವ ಧರ್ಮವು ವಿದ್ವಾಂಸರಿಂದ ಆಚರಿಸಲ್ಪಡುವದೊ ಯಾವುದನ್ನು ರಾಗದ್ವೇಷರಹಿತರಾದ ಸಾಧುಗಳು ತಮ್ಮ ಅಂತಃರಕಣದಿಂದ ತಿಳಿದುಕೊಳ್ಳುವರೊ ಆ ಧರ್ಮವನ್ನು ಹೇಳಿರಿ' (ಮನು: ೨.೧) ಎಂದು ಧರ್ಮದ ರೂಪವನ್ನು ಕುರಿತು ಮನುಸ್ಮೃತಿಯ ವಾಕ್ಯವಿದೆ. ಹೃದಯ ಸಂಶಯಗಳ ನಿವಾರಣೆಗಾಗಿ ಹಾಗೂ ಧರ್ಮಸಂಕಟಗಳ ನಿರಾಕರಣೆಗಾಗಿ ಅದೊಂದೆ ಸಾಧನವು. ಸಮಬುದ್ಧಿಯಿಂದ ಮಾಡಿದ ನಿರ್ಣಯದ ಸರಿಜೋಡಿಗೆ ಇನ್ನಾವ ನಿರ್ಣಯವೂ ಬಾರದು.ಅದರಲ್ಲಿ ಅನಾಯಾಸವಾಗಿ ಏನಾದರೂ ದೋಷಗಳುಂಟಾದರೆ ಅವು ಕರ್ತನನ್ನು ಬಾಧಿಸವು. ಅವನ ಅಂತಃಕರಣವು ನಿಷ್ಪಾಪವೂ ನಿರ್ಮಲವೂ ಇರುವುದರಿಂದ ಅವನು ಮಾಡುವ ಕರ್ಮದಲ್ಲಿ ಏನಾದರೂ ಅಪೂರ್ಣತೆ ಅಥವಾ ದೋಷವಿದ್ದರೆ ಅದು ಅವನನ್ನು ಕಲುಷಿತ ಮಾಡದು, ಅವನ ವಿಕಾಸವು ಅದರಿಂದ ತಡೆಯದು, ಅವನ ಗತಿಯು ಹಿಮ್ಮೆಟ್ಟಲಾರದು. ಅವನ ಅಂತರವು ಸದೈವ ನಿಷ್ಕಲಂಕವಿದ್ದು ಅವನಲ್ಲಿ ಅಂತಃಸುಖವು ನಿತ್ಯ ನೆಲೆಯಾಗಿರುವದು.

## ೮೪ ಸಾಮ್ಯಬುದ್ಧಿ ಮತ್ತು ಭಕ್ತಿ

ಸಂಸಾರದಲ್ಲಿ ಸ್ವಕರ್ಮ ಮಾಡುತ್ತಿರುವಾಗ ಒದಗುವ ಚಂಚಲ ಸುಖದುಃಖಗಳ ಅಲೆದಾಟದಿಂದ ಮನುಷ್ಯನು ಅಲಿಪ್ತನಿದ್ದು ಯಾವಾಗಲೂ ವಿಶ್ರಾಂತಿಯನ್ನನುಭವಿಸಬೇಕಾದರೆ ಸಾಮ್ಯಬುದ್ಧಿಯೆ ಉತ್ತಮ ಸಾಧನವು; ಆದುದರಿಂದಲೆ ಬುದ್ಧೌ ಶರಣಮನ್ವಿಚ್ಛ (೨.೪೯) 'ಸಾಮ್ಯಬುದ್ಧಿಗೆ ಶರಣ ಹೋಗು,' ಎಂದು ಗೀತೆಯು ಆದೇಶವಿರುವದು. ಬುದ್ಧಿಯ ಸಮತೆಯೆ ಯೋಗವು, ಅದನ್ನು ಪಡೆಯುವ ಮುಖ್ಯ ಸಾಧನಗಳೆಂದರೆ ಸಂಯಮ ಮತ್ತು ಆತ್ಮಜ್ಞಾನ. ಆತ್ಮಜ್ಞಾನಕ್ಕೆ ಆತ್ಮಚಿಂತನವೆ ತಳಹದಿಯು. ದ್ರಷ್ಟವ್ಯವು ಇದು, ಶ್ರೋತವ್ಯವು ಇದು, ಮಂತ್ರವ್ಯವು ಇದು, ನಿದಿಧ್ಯಾಸಿತವ್ಯವು ಇದು, ಎಂದು ಯಾಜ್ಞವಲ್ಕ್ಯನು ಆತ್ಮಜ್ಞಾನದ ಮಾರ್ಗವನ್ನು ಹೇಳಿರುವನು. ಅರ್ಥಾತ್ ಜ್ಞಾನಶಕ್ತಿ ಮತ್ತು ಸ್ವಾಶ್ರಯ ಇವು ಈ ಮಾರ್ಗದಲ್ಲಿ ಆವಶ್ಯ. ಆದರೆ ಇದು ಎಲ್ಲರಿಗೂ ಸುಗಮವಿಲ್ಲ. ಎಲ್ಲರಲ್ಲಿಯೂ ಅಂಥ ತೀವ್ರ ಬುದ್ಧಿ ಮುಂತಾದವುಗಳು ಇರಲಾರವು. ಸಾಮಾನ್ಯ ಮನುಷ್ಯನು ದುರ್ಬಲನಿರುವದರಿಂದ ಪರಾಶ್ರಯವನ್ನು ಅರಸುವನು ಮತ್ತು ಭಕ್ತಿಮಾರ್ಗವು ಆ ಆಶ್ರಯವನ್ನು ಅಣಿಮಾಡಿಕೊಡುವದು. ತಮೇವ ಶರಣಂ ಗಚ್ಛ (೧೮.೬೨) ಮತ್ತು, ಮಾಮೇಕಂ ಶರಣಂ ವ್ರಜ (೧೮.೬೬) 'ಈಶ್ವರನಿಗೆ ಶರಣ ಹೋಗು' ಮತ್ತು 'ನನಗೆ ಶರಣಾಗತನಾಗು,' ಎಂಬ ವಚನಗಳ ಮೂಲಕ ಗೀತೆಯು ಎಲ್ಲರಿಗೂ ಭಕ್ತಿಮಾರ್ಗದ ಸುಲಭ ಹಾದಿಯನ್ನು ತೋರುವದು.

## ೧೧ ಭಕ್ತಿಯೋಗದ ಲಕ್ಷಣಗಳು

### ೬೫ ಭಕ್ತಿಮಾರ್ಗವು

ಜನಕಾದಿ ಮಹಾಪುರುಷರು ಆಚರಿಸಿದ ಕರ್ಮಯೋಗದಲ್ಲಿ ಫಲಾಶಾತ್ಯಾಗವು ಮುಖ್ಯವಾದ ಅಂಶವು. ಅದು ಆತ್ಮಸ್ವರೂಪದರ್ಶನದ ವಿನಾ ಪೂರ್ಣ ಸಾಧಿಸಲರಿಯದು. ಆತ್ಮದರ್ಶನವು ತೀವ್ರ ಮತ್ತು ಬಲವಾನ್ ಬುದ್ಧಿಯ ಸಹಾಯದ ಹೊರತು ಆಗುವದು ದುಸ್ತರವು. ಆದರೆ ಈ ಬಗೆಯ ಶಕ್ತಿಯು ಎಲ್ಲರಲ್ಲಿ ದೊಡ್ಡ ಪ್ರಮಾಣದಲ್ಲಿ ಇರುವದಿಲ್ಲ, ಎಂಬ ಅನುಭವ ವಿದೆ. ಅರ್ಥಾತ್ ಆತ್ಮಾನಾತ್ಮವಿವೇಕಪೂರ್ವಕವಾಗಿ ತತ್ವ ನಿಶ್ಚಯ ಮಾಡಿ ತಚ್ಚಿಂತನದಲ್ಲಿ ಲೀನವಾಗುವ ಸಾಮರ್ಥ್ಯವು ಸಾಮಾನ್ಯರಲ್ಲಿ ಕಂಡು ಬರುವದಿಲ್ಲ. ಹೀಗೆ ಅಂದಾಕ್ಷಣಕ್ಕೆ ಬಹುಜನ ಸಮಾಜಕ್ಕೆ ಆತ್ಮದರ್ಶನದ ಹಾಗೂ ತದನುಷಂಗಿಯಾದ ಫಲಾಶಾತ್ಯಾಗದ ಆಶೆಯೆ ಇಲ್ಲವೋ ಎಂದು ಯಾರಾದರೂ ಕೇಳಬಹುದು. ಈ ಪ್ರಶ್ನೆಗೆ, 'ರಾಜವಿದ್ಯೆ' 'ರಾಜಗುಹ್ಯ' ಎಂಬ ಹೆಸರು ಪಡೆದ ಸರಲ, ಸುಲಭವಾದ, ಭಕ್ತಿಮಾರ್ಗದ ಕಡೆಗೆ ಬೆರಳು ತೋರಿಸಿ ಗೀತೆಯು ಸಮಾಧಾನಕಾರಕವಾದ ಉತ್ತರವನ್ನು ಕೊಟ್ಟಿರುವದು. ಭಕ್ತನೂ ಜ್ಞಾನಪಡೆದು ಕರ್ಮಯೋಗಿಯಾಗಬಲ್ಲನು ಎಂದು ಗೀತೆಯ ವಚನವಿರುವದು.

### ೬೬ ಈಶ್ವರಾರ್ಪಣ ಬುದ್ಧಿಯು

ಸಾ(ಭಕ್ತಿಃ) ಪರಾನುರಕ್ತಿರೀಶ್ವರೇ (ಶಾಂಡಿಲ್ಯಸೂತ್ರ) 'ಈಶ್ವರನಲ್ಲಿ ನಿರತಿಶಯ ಪ್ರೇಮವನ್ನಿಡುವದೆ ಭಕ್ತಿಯು.' ಆ

ಅಸುರಾಗವು ಉದ್ದೇಶಮೂಲಕವು ಅಥವಾ ಮರ್ಯಾದಿತವು ಇರಕೂಡದು,ಎಂದು ಭಾಗವತದಲ್ಲಿ (ಅಹೇ ತುಕೀ ಅವ್ಯವ ಹಿತಾ) ಆದೇಶವಿರುವದು.ಸಕಲ ಭಾವನೆಗಳು ಕರಗಿ ಪ್ರೇಮ' ರಸವೇ ಆಗಿರುವ ಭಕ್ತನ ಪ್ರೇಮವು ಕಾಮಗಂಧವಿಹೀನ ವಿರುವದು. ಅಂಥವನ ಪ್ರೇಮ ಪ್ರವಾಹವು ಪ್ರೇಮಾರ್ಥವೆ ಹೊರತು ಪ್ರೇಯಾರ್ಥವಲ್ಲ, ಶ್ರೇಯಾರ್ಥವೂ ಅಲ್ಲ. ಭಕ್ತನು ತನ್ನ ಜೀವನವೆಲ್ಲ ಪ್ರಭುವಿನಡಿಗೆ ಒಪ್ಪಿಸುವನು, ಅವನ ಕರ್ಮವೆಲ್ಲ ಪ್ರಭುಪ್ರಾಪ್ತಿಗಾಗಿ ಇರುವದು. ಅವನು ಪ್ರಭು ವಿನ ಕೇವಲ ಕೈಗೊಂಬೆಯಂತೆ ನಿಮಿತ್ತ ಮಾತ್ರನಾಗಿ ಜೀವಿ ಸುವನು. ಅವನು ಸಂಸಾರದಲ್ಲಿದ್ದು ಸ್ವಕರ್ಮಪರಾಯ ಣನಿದ್ದರೂ ಫಲಸರ್ವಸ್ವವನ್ನು ಪ್ರಭುವಿಗೆ ಅರ್ಪಿಸುವನು. ಅವನ ಹೃದಯಾನುಸಂಧಾನವು ಈಶ್ವರನೊಡನೆ ಇರುವದು ಮತ್ತು ಅವನು ಸದೈವ ಈಶ್ವರನಲ್ಲಿ ಓತ ಪ್ರೋತನಿರುವನು. ಈ ಸಾಧನದಿಂದ ಅವನ ಚಿತ್ತದಲ್ಲಿಯ ಕಿಲುಬು ಕಲ್ಮಷಗಳೆಲ್ಲ ತೊಳೆದು ಹೋಗಿ ಅಂತರದಲ್ಲಿ ಸ್ವಚ್ಛ ಬೆಳಕು ಬೆಳಗುವದು. ಆ ಮೇಲೆ ಅನಾಸಕ್ತಿಯಿಂದ ಸಲ್ಲುವ ಸಾಮ್ಯಬುದ್ಧಿಯೆ ಅವನಲ್ಲಿ ಈಶ್ವರಾರ್ಪಣ ಭಾವದಿಂದ ನೆಲೆಯಾಗುವದು.

**೮೭ ಸಗುಣ ಭಕ್ತಿ ಮತ್ತು ಅದರ ಫಲ**

ಈ ವಿಶ್ವವನ್ನು ವ್ಯಾಪಿಸಿರುವ ಪರಮ ತತ್ವವು ನಿರ್ಗುಣ ಅವ್ಯಕ್ತ ಬ್ರಹ್ಮವು. ಅದು ಕಣ್ಮನಗಳಿಗಗೋಚರವು, ಆದುದ ರಿಂದ ಅದರ ಭಕ್ತಿಯು ಅಸಂಭವವು. ಭಕ್ತಿಗಾಗಿ ಅದಕ್ಕೆ ಸಗುಣ ಸ್ವರೂಪವನ್ನು ಕಲ್ಪಿಸುವರು; ಆಗ ಅದೇ 'ಈಶ್ವರ' ಎನಿಸುವದು. ಈಶ್ವರನು ಸಗುಣನಿದ್ದರೂ ಅವ್ಯಕ್ತನಿರುವದ

ರಿಂದ ಭಕ್ತಿಗೆ ಅಷ್ಟೊಂದು ಸುಲಭವಾಗಿ ಒಳಗಾಗನು.ತಮಗೆ ಈಶ್ವರನು ತೀರ ಸಮೀಪನಾಗಬೇಕೆಂದು ಭಕ್ತರು ಅವನಿಗೆ ಸಗುಣ ವ್ಯಕ್ತ ಸ್ವರೂಪವನ್ನು ಕೊಡುವರು ಮತ್ತು ಗತಿ ರ್ಭತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ (೯.೧೮) 'ಎಲ್ಲರ ಗತಿ, ಎಲ್ಲರ ಪೋಷಕ, ಸಾಕ್ಷಿ, ಒಡೆಯ, ಎಲ್ಲರ ಆಶ್ರಯಸ್ಥಾನ, ಎಲ್ಲರ ಶರಣಸ್ಥಾನ, ಎಲ್ಲರ ಗೆಳೆಯ ಹೀಗಿರುವ ಈಶ್ವರನನ್ನು ಉಪಾಸಿಸುವರು. ಈ ಪರಿಯ ವ್ಯಕ್ತೋಪಾಸನೆಯ ಮಹಿಮೆಯನ್ನು ಗೀತೆಯು ಹೊಗಳಿರು ವದು ಮತ್ತು ಅವ್ಯಕ್ತ ಪರಮಾತ್ಮನ ವ್ಯಕ್ತವಿಭೂತಿಗಳ ನಾಮನಿರ್ದೇಶವನ್ನು ಮಾಡಿ ಭಕ್ತಿಮಾರ್ಗವನ್ನು ಮತ್ತಷ್ಟು ಸುಲಭ ಮಾಡಿರುವದು. ವಿಭೂತಿಯು ಕೇವಲ ಸಾಧನ ಮಾತ್ರವು, ಈಶ್ವರನ ಪ್ರತೀಕ ಮಾತ್ರವು, ಅಂಶಮಾತ್ರವಿರು ವದು ಎಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಡಲಿಕ್ಕೆಬೇಕು. ವಿಭೂ ತಿಯೆ ಸರ್ವಸ್ವ, ಪ್ರತಿಬಿಂಬವೆ ಬಿಂಬ ಎಂದು ಯಾರಾದರೂ ತಿಳಿದರೆ ಅದು ಹಾಸ್ಯಾಸ್ಪದವು. ಆದರಿಂದ ಆತ್ಮಾನುಭವವು ಅಳವಡದು ಎಂಬುದು ಸಿದ್ಧಾಂತವು. ಅವ್ಯಕ್ತನಾದ ನಾನು ವ್ಯಕ್ತ ಸ್ವರೂಪವನ್ನು ಪಡೆದಿರುವೆನೆಂದು ಮೂಢರು ತಿಳಿಯುವರು (೭.೨೪) ಎಂಬ ಶ್ರೀಕೃಷ್ಣ ವಚನವು ಈ ವಿಷಯದಲ್ಲಿ ಸ್ಪಷ್ಟವಿರುವದು. ಆದರೆ ದೇಹವುಳ್ಳವರಿಗೆ ಅವ್ಯಕ್ತಮಾರ್ಗವು ಕಠಿಣ (೧೨.೫) ಎಂಬುದರ ಸಲುವಾಗಿ ಕೇವಲ ನಿರ್ದೇಶ ಮಾತ್ರವೆಂದು ವ್ಯಕ್ತದ ಅವಲಂಬನವು ಉಪಯುಕ್ತವು. ಸಿದ್ಧಿಯು ಯಾವದೊಂದು ಪದ್ಧತಿ

ಯನ್ನು ಇಲ್ಲವೆ ಭಕ್ತನು ಸ್ವೀಕರಿಸಿದ ಮೂರ್ತಿಯನ್ನು ಅವ ಲಂಬಿಸಿಲ್ಲ, ಭಕ್ತನ ಭಾವನೆಯನ್ನು ಅವಲಂಬಿಸಿದೆ. ಭಾವ ದಂತೆ ದೇವ, ಎಂಬುದು ಅನುಭವಸಿದ್ಧ ಮಾತಾಗಿದೆ. ಆದುದ ರಿಂದ ಭಕ್ತನು ಯಾವದೇ ಕುರುಹನ್ನು ಕೈಕೊಂಡಿದ್ದರೂ ಸರ್ವವ್ಯಾಪಿ ಪರಮಾತ್ಮನಲ್ಲಿ ಅವನ ದೃಷ್ಟಿ ನಟ್ಟಿದ್ದರೆ ಅವನಿಗೆ ಆತ್ಮಜ್ಞಾನವೆಂಬ ಫಲವು ದೊರಕುವದು.

### ೮೮ ಶ್ರದ್ಧೆ ಮತ್ತು ಬುದ್ಧಿ

ಭಕ್ತಿಯು ಶಕ್ತಿಯೂ ಶ್ರದ್ಧೆಯನ್ನವಲಂಬಿಸಿರುವದು. ನಚ್ಚಿಲ್ಲದ ಮೆಚ್ಚು ಹೊಲ್ಲವು. ಶ್ರದ್ಧೆ, ವಿಶ್ವಾಸ, ನಂಬಿಗೆ ಇವು ಗಳಿಗೆ ಸಂಸಾರದಲ್ಲಿ ದೊಡ್ಡ ಮತ್ತು ಮಹತ್ವದ ಸ್ಥಾನವಿರು ವದು. ವಿಶ್ವಾಸಕ್ಕೆ ಪಾತ್ರರಾದವರ ವಚನವನ್ನು ನಂಬಿ ವರ್ತಿಸಿದರೆ ಹಾನಿಯಾಗದು. ಜೀವನದಲ್ಲಿಯ ಅನೇಕ ವ್ಯವಹಾರಗಳು ನಂಬಿಗೆಯಿಂದಲೆ ನಡೆಯುವವು. ವಿವಿಧ ಪ್ರಕಾರದ ಜ್ಞಾನವಿಜ್ಞಾನಗಳ ಉಪಯೋಗವು ಪರಸ್ಪರರಿಗೆ ಆಗಬೇಕಾದರೆ ಪರಸ್ಪರರ ವಿಶ್ವಾಸವೇ ಕಾರಣವು. ಮಾನವ ಸಮಾಜವು ಸಹ ಅನ್ಯೋನ್ಯ ವಿಶ್ವಾಸದ ಮೂಲಕವೆ ಅಸ್ತಿತ್ವ ದಲ್ಲಿರುವದು. ನಾಳೆ ಸೂರ್ಯನು ಮೂಡುವನು, ಎಂಬು ದಾದರೂ ತರ್ಕಕ್ಕಿಂತ ಶ್ರದ್ಧೆಯಿಂದಲೆ ಹೆಚ್ಚು ಸಿದ್ಧವಾಗು ವದು. ನಾವು ಬುದ್ಧಿಯಿಂದ ಪಡೆದ ಜ್ಞಾನದಲ್ಲಿ ನಮ್ಮ ವಿಶ್ವಾಸವಿಲ್ಲದೆ ಹೋದರೆ ನಮ್ಮ ವಿದ್ಯೆಯೆಲ್ಲ ಗಿಳಿ ವಿದ್ಯೆಯೆ ಆಗಿಹೋಗುವದು. ಈ ಪ್ರಕಾರ ನಮ್ಮ ಜೀವನದಲ್ಲಿ ಶ್ರದ್ಧೆಯು ಅವಶ್ಯವು. ಉಪನಿಷತ್ತಿನಲ್ಲಿ ಮಗನಿಗೆ

ಜ್ಞಾನವನ್ನು ಸುರುವಾಗ ಆರುಣಿಯು ಕೊನೆಗೆ 'ಶ್ರದ್ಧತ್ಸ್ವ (ಛಾಂದೋಗ್ಯ ೬. ೧೨) ಎಂಬ, ಈ ವಟಬೀಜದಲ್ಲಿ ನಿನ್ನ ಕಣ್ಣಿಗೆ ಏನೂ ಕಾಣದಿದ್ದರೂ ಇದರಿಂದಲೆ ಮಹಾ ವಟ ವೃಕ್ಷವು ಹುಟ್ಟುವದು, ಎಂದು ಹೇಳುವನು. ಗೀತೆಯಲ್ಲಿಯೂ ಶ್ರದ್ಧಾವಂತ ಕರ್ಮಯೋಗಿಯೆ ಶ್ರೇಷ್ಠನೆಂದು (೬.೪೭) ವರ್ಣನೆ ಇದೆ. ಆದರೆ ಶ್ರದ್ಧೆ-ಪ್ರೇಮಗಳು ವಿವೇಕಶಕ್ತಿಯ ಸಹಾಯದ ವಿನಾ ಕುರುಡರಂತೆ ಇರುವವು. ವಿವೇಕಹೀನ ಶ್ರದ್ಧೆಯು ಮನುಷ್ಯನನ್ನು ಯಾವ ತಗ್ಗಿನಲ್ಲಿ ಕೆಡವಬಹುದೋ ಹೇಳಲಿಕ್ಕಾಗದು. ಶ್ರದ್ಧೆಯಿಂದ ಸಾಗುವದಾದರೂ ಶ್ರದ್ಧೆಯನ್ನು ಯಾರಲ್ಲಿಡಬೇಕು, ಎಂಬುದನ್ನು ಮೊದಲು ಬುದ್ಧಿಯಿಂದಲೆ ನಿರ್ಣಯಿಸಬೇಕಾಗುವದು. ಅದೇ ಪ್ರಕಾರ, ಶ್ರದ್ಧಾರಹಿತ ಬುದ್ಧಿಯೂ ಕರ್ತೃತ್ವಶೂನ್ಯವಿರುವದು. ಈ ರೀತಿ ಜೀವನದಲ್ಲಿ ಶ್ರದ್ಧೆ-ಬುದ್ಧಿಗಳು ಸಮಸಂದು ಇದ್ದರೆಯೆ ಎಲ್ಲವೂ ಸುಸೂತ್ರ ಸಾಗುವದು. ಭಕ್ತಿಮಾರ್ಗದಲ್ಲಿ ಬುದ್ಧಿಗಿಂತ ಶ್ರದ್ಧೆಯ ಪ್ರಮಾಣವು ಹೆಚ್ಚು ಬೇಕಾಗುವದರಿಂದ ಶ್ರದ್ಧೆಯು ಭಕ್ತಿಯ ಶಕ್ತಿಯೆಂದೆನಿಸುವದು. ಶ್ರದ್ಧೆಯೂ ಮನಸಿನ ಧರ್ಮವಿರುವದು. ಮನಬುದ್ಧಿಗಳೆರಡೂ ತ್ರಿಗುಣಾತ್ಮಕ ಪ್ರಕೃತಿಯಿಂದ ಹುಟ್ಟಿದವುಗಳಾದುದರಿಂದ ಅವು ಸಾತ್ವಿಕ, ರಾಜಸ, ತಾಮಸ ಹೀಗೆ ಮೂರು ಬಗೆ ಇರಬಲ್ಲವು. ಶ್ರದ್ಧೆ ಬುದ್ಧಿಗಳ ಸಂಯೋಗದಿಂದಲೆ ಸಿದ್ಧಿಯಾಗುತ್ತಿರುವದರಿಂದ ಎರಡೂ ಸಾತ್ವಿಕವಿದ್ದರೆ ಮಾತ್ರ ಉತ್ತಮ ಫಲದ ನಿಷ್ಪತ್ತಿಯಾಗುವದು. ಅರ್ಥಾತ್ ಭಕ್ತನು ಶ್ರದ್ಧೆ ಬುದ್ಧಿಗಳೆರಡನ್ನೂ

ಸಾತ್ವಿಕಗೊಳಿಸಲು ಸತತ ಪ್ರಯತ್ನವನ್ನು ಮಾಡಲಿಕ್ಕೆಬೇಕು.

### ೮೯ ಮಾರ್ಗಗಳೆರಡು, ಗುರಿಯು ಒಂದೇ

ಭಕ್ತಿ ಮತ್ತು ಜ್ಞಾನಮಾರ್ಗಗಳು ಬೇರೆಬೇರೆ ಕಂಡರೂ ಒಂದೇ ಒಂದು ಪರಮ ತತ್ವವು ಅವೆರಡರಿಂದಲೂ ಪ್ರಾಪ್ತ ವಾಗುವದು. ಭಕ್ತಿಮಾರ್ಗದಲ್ಲಿ ಸಗುಣ ಮತ್ತು ವ್ಯಕ್ತ ಬ್ರಹ್ಮನ ಉಪಾಸನೆ ಮಾಡಲ್ಪಡುವದು, ಜ್ಞಾನಮಾರ್ಗ ದಲ್ಲಿ ಸಗುಣ ಅವ್ಯಕ್ತ ಬ್ರಹ್ಮನು ಉಪಾಸ್ಯನಿರುವನು. ಮೊದ ಲನೆಯದರಲ್ಲಿ ಅಪಾರ ಶ್ರದ್ಧೆಯ ಬಲದಿಂದ ಸಾಗಬೇಕಾಗು ವದು, ಎರಡನೆಯ ಮಾರ್ಗದಲ್ಲಿ ತೀವ್ರಬುದ್ಧಿಯಿಂದ ಜ್ಞಾನ ಗ್ರಹಣ ಮಾಡಬೇಕಾಗುವದು. ಎರಡೂ ಮಾರ್ಗಗಳಲ್ಲಿ ಒಂದೇ ಆತ್ಮಾನುಭವಕ್ಕಾಗಿ, ಸಾಕ್ಷಾತ್ಕಾರಕ್ಕಾಗಿ ಯತ್ನವು ಮಾಡಲ್ಪಡುವದು ಮತ್ತು ಕೊನೆಗೆ ಒಂದೇ ಬಗೆಯ ಬ್ರಹ್ಮಾ ನಂದವಾಗುವದು. ಸಾಧಕನು ಮುಂದುವರಿದಂತೆ ಆರಂಭಕ್ಕೆ ತೋರುವ ಭೇದವು ಕಡಿಮೆಯಾಗುತ್ತ ಹೋಗಿ ಕೊನೆಗೆ ಅದು ನಿರ್ನಾಮವಾಗುವದು. ಜ್ಞಾನಮಾರ್ಗದಲ್ಲಿ ಕರ್ಮ ಫಲದ ಅನಾಸಕ್ತಿಯಿಂದ ಕಾಮನಾಕ್ಷಯವಾದರೆ ಭಕ್ತಿ ಮಾರ್ಗದಲ್ಲಿ ಕರ್ಮಫಲವನ್ನು ಕೃಷ್ಣಾರ್ಪಣ ಮಾಡುವದರಿಂದ ಕಾಮನೆಗಳು ಬೇರುಸಹಿತ ಕಿತ್ತುಹೋಗುವವು. ಬಳಿಕ ಬುದ್ಧಿಯು ಸಮವಾಗುವದು ಮತ್ತು ಆತ್ಮಾನುಭವವು ಸಮನಿಸುವದು. ಎರಡೂ ಮಾರ್ಗಗಳಲ್ಲಿ ಅಂತಃಕರಣದ ಮುಕ್ತಾವಸ್ಥೆಯು ಒಂದೇ ಬಗೆಯದ್ದಿರುವದು. ಆದುದರಿಂದ ಪರಮಭಕ್ತನ ಹಾಗೂ ಸ್ಥಿತಪ್ರಜ್ಞನ ವರ್ಣನೆಯು ಗೀತೆಯ

ಎರಡನೇ ಮತ್ತು ಹನ್ನೆರಡನೇ ಅಧ್ಯಾಯುಗಳಲ್ಲಿ ಒಂದೇ ತರಹದ್ದಿರುವದು.

### ೯೦ ಜ್ಞಾನನಿಷ್ಠೆ ಹಾಗೂ ಕರ್ಮನಿಷ್ಠೆ

ಹೀಗೆ ಭಕ್ತಿ ಮತ್ತು ಜ್ಞಾನ ಇವು ಮನುಷ್ಯನ ಅಂತಃ ಕರಣವನ್ನು ಬ್ರಹ್ಮಾನುಭವಕ್ಕೆ ಯೋಗ್ಯವಾಗುವಂತೆ ಮಾಡುವ ಎರಡು ಸಾಧನಗಳಿರುವವು. ಒಂದರಲ್ಲಿ ಶ್ರದ್ಧೆಯು ಇನ್ನೊಂದರಲ್ಲಿ ಬುದ್ಧಿಯು ತನ್ನ ಪ್ರಾಬಲ್ಯದಿಂದ ಅಂತಃಕರಣ ವನ್ನು ಸ್ಫಟಿಕದಂತೆ ಸ್ವಚ್ಛಮಾಡಿ ಅದರಲ್ಲಿ ಪರಮ ಸುಖವು ಪ್ರತಿಬಿಂಬಿತವಾಗುವಂತೆ ಮಾಡುವದು. ಬುದ್ಧಿಶ್ರದ್ಧೆಗಳ ಆತ್ಯಂತಿಕ ವಿಯೋಗವು ಮಾತ್ರ ಎಂದಿಗೂ ಆಗದು. ಅವೆರಡೂ ಒಂದೇ ಕಡೆಗೆ ಅಂದರೆ ಮನುಷ್ಯನ ಅಂತರದಲ್ಲಿ ವಾಸಮಾಡು ತ್ತಿರುವವು. ಆದರೆ ಅವು ವಿಶಿಷ್ಟ ಗುಣಗಳುಳ್ಳವುಗಳಿದ್ದುದ ರಿಂದ ಅವುಗಳನ್ನುಪಯೋಗಿಸುವ ಸಾಧಕನು ಎರಡು ಬೇರೆ ಮಾರ್ಗಗಳಿಂದ ಸಾಗಿದಂತೆ ತೋರುವನು. ಇವೆರಡು ಸ್ವತಂತ್ರ ಮಾರ್ಗಗಳೆಂದು ಗೀತೆಯು ಎಂದೂ ತಿಳಿಯುವದಿಲ್ಲ. ಜ್ಞಾನದಲ್ಲಿ ಭಕ್ತಿಯನ್ನು, ಭಕ್ತಿಯಲ್ಲಿ ಜ್ಞಾನವನ್ನು ಸರಿಬೆರಿಸಿ ಗೀತೆಯು ಸುಂದರ ಸಮನ್ವಯ ಮಾರ್ಗವನ್ನು ಸಿದ್ಧಪಡಿಸು ವದು. ಜ್ಞಾನದ ಪರಿಪೂರ್ತಿಯು ಐಕ್ಯಾನುಭವದಲ್ಲಿ ಆಗು ವಂತೆ ಭಕ್ತಿಯ ಪರ್ಯವಸಾನವೂ ಆ ಅನುಭವದಲ್ಲಿಯೆ ಆಗು ವದು. ಎರಡೂ ಮಾರ್ಗಗಳ ಗುರಿ, ಗುಟ್ಟು ಹಾಗೂ ಸಿದ್ಧಿ ಇವು ಒಂದೇ. ಭಕ್ತನು ಅಥವಾ ಜ್ಞಾನಿಯು ಸಾಕ್ಷಾತ್ಕಾರ ವಾದ ಬಳಿಕ ಕರ್ಮಬಿಟ್ಟು ಹರೀಕಿರ್ತನದಲ್ಲಿ ಮಗ್ನನಾದರೆ

ಇಲ್ಲವೆ ಅಂತರ್ಮುಖನಾಗಿ ಸಮಾಧಿಸ್ಥನಾದರೆ ಅದು ಜ್ಞಾನ ನಿಷ್ಠೆಯೆನಿಸುವದು. ಕರ್ಮಬಿಡದೆ ಅನಾಸಕ್ತಿಪೂರ್ವಕವಾಗಿ ಕರ್ಮಪರಾಯಣನಾಗಿದ್ದರೆ ಅದು ಕರ್ಮನಿಷ್ಠೆಯೆನಿಸುವದು. ಗೀತೆಯಲ್ಲಿ ಆತ್ಮಾನುಭವಿಯ ಈ ಎರಡೂ ನಿಷ್ಠೆಗಳು ಉಕ್ತ ವಾಗಿದ್ದರೂ ಗೀತೆಯು ಕರ್ಮನಿಷ್ಠೆಯೆ ಮೇಲು ಎಂದು ಸ್ಪಷ್ಟವಾಗಿ ತೋರಿಸಿ ಕೊಟ್ಟಿರುವದು.

### ೯೧ ಭಕ್ತಿಜ್ಞಾನಗಳ ಸಮನ್ವಯವು

ಭಕ್ತಿ ಹಾಗೂ ಜ್ಞಾನ ಇವು ಒಂದೇ ಅಂತಃಕರಣದ ಎರಡು ಬೇರೆ ಬೇರೆ ಧರ್ಮಗಳೆಂದು ಕಂಡರೂ ಸಾಮ್ಯಬುದ್ಧಿ ರೂಪ ಒಂದೇ ಸಾಧ್ಯವನ್ನು ದೊರಕಿಸುವವು. ಗೀತೆಯಲ್ಲಿ ಭಕ್ತಿ ಮತ್ತು ಜ್ಞಾನ ಇವುಗಳ ಪರಿಭಾಷೆಯು ಬೇರೆ ಬೇರೆ ಇದ್ದರೂ ತತ್ವತಃ ಅವೆರಡೂ ಒಂದೇ ಎಂಬುದೆ ಗೀತೆಯ ಮರ್ಮವು. ಇದನ್ನು ನಾವು ಮರೆಯಕೂಡದು. ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ (೬.೩೦) 'ಯಾವನು ನನ್ನನ್ನು ಎಲ್ಲೆಡೆಯಲ್ಲಿ ಮತ್ತು ಎಲ್ಲವನ್ನು ನನ್ನಲ್ಲಿ ನೋಡುವನೊ' ಎಂಬ ಭಕ್ತಿದೃಷ್ಟಿಯಿಂದ ವರ್ಣಿಸಿದ ಏಕಾತ್ಮಭಾವವೆ, ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ (೬.೨೯) 'ಸರ್ವಭೂತಗಳಲ್ಲಿರುವ ಒಂದೇ ಆತ್ಮನನ್ನು ಅದೇ ಆತ್ಮನಲ್ಲಿರುವ ಎಲ್ಲ ಭೂತಗಳನ್ನು,' ಎಂದು ಜ್ಞಾನ ದೃಷ್ಟಿಯಿಂದ ವರ್ಣಿಸಲ್ಪಟ್ಟಿದೆ. ಈ ಏಕಾತ್ಮಭಾವವನ್ನು ಪಡೆ ಯುವ ಸಾಧನವನ್ನು ಹೇಳುವಾಗ, ಬುದ್ಧೌ ಶರಣಮನ್ವಿಚ್ಛ (೨.೪೯) 'ಸಾಮ್ಯಬುದ್ಧಿಗೆ ಶರಣಾಗತನಾಗು,' ಎಂದು ಜ್ಞಾನ

ದೃಷ್ಟಿಯಿಂದ ಗೀತೆಯು ಒಂದೆಡೆಗೆ ಹೇಳಿದರೆ ಅದೇ ಸಂಗತಿ ಯನ್ನು ಮಾಮೇಕಂ ಶರಣಂ ವ್ರಜ (೧೮.೬೬) 'ನನ್ನೊಬ್ಬ ನಿಗೆ ಶರಣಾಗತನಾಗು,' ಎಂದು ಭಕ್ತಿದೃಷ್ಟಿಯಿಂದ ಅದು ಇನ್ನೊಂದೆಡೆಗೆ ಹೇಳಿರುವದು. ನಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ (೬.೪೦) 'ತಾತಾ, ಕಲ್ಯಾಣ ಮಾಡುವ ಯಾವ ಪುರುಷನೂ ಕೆಟ್ಟಗತಿಗೆ ಎಂದೂ ಹೋಗನು,' ಎಂದು ಜ್ಞಾನಮಾರ್ಗದ ದೃಷ್ಟಿಯಿಂದ ಹೇಳಿದ್ದೆ ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ (೯.೩೧) 'ಕುಂತೀಪುತ್ರನೇ, ನನ್ನ ಭಕ್ತನು ಎಂದಿಗೂ ನಾಶ ಹೊಂದನು,' ಎಂದು ಭಕ್ತನಿಗೆ ಕೊಟ್ಟ ಆಶ್ವಾಸನದಲ್ಲಿ ವ್ಯಕ್ತ ವಾಗುವದು. ಈ ರೀತಿ, ಗೀತೆಯಲ್ಲಿ ಈ ಎರಡೂ ಮಾರ್ಗ ಗಳಿಗೆ ಅನ್ವಯಿಸುವ ವಿಚಾರಗಳು ಕೆಲವು ಸಾರೆ ಬೇರೆ ಬೇರೆ ಕಡೆಗೆ, ಎಷ್ಟೋ ಸಾರೆ ಒಂದೇ ಕಡೆಗೆ ಕಂಡು ಬರುವವು ಮತ್ತು ಈ ಮಾರ್ಗಗಳ ಸಮನ್ವಯವನ್ನು ತೋರುವವು.

### ೯೨ ಗೀತೋಕ್ತ ಭಕ್ತಿಮಾರ್ಗವು

ಇನ್ನು ಪ್ರಚಲಿತ ಭಕ್ತಿಮಾರ್ಗ ಮತ್ತು ಗೀತೆಯ ಭಕ್ತಿಮಾರ್ಗ ಇವುಗಳಲ್ಲಿ ಒಂದು ಮಹತ್ವದ ಭೇದವಿದೆ. ಗೀತೆಯ ಭಕ್ತಿಯು ನಿವೃತ್ತಿಪರವಿಲ್ಲ. ಗೀತೆಯ ಭಕ್ತನು ಗೀತೆಯ ಜ್ಞಾನಿಯಂತೆ ಆಜೀವನ ಕರ್ಮ ಮಾಡುವನು. ಇತ್ತ ಅಭೇದಭಾವವನ್ನು ಹೊಂದಿ ಜ್ಞಾನಿಯು ನಿಷ್ಕಾಮಿ ಯಾಗಿ ಕರ್ಮಮಾಡಿದರೆ, ಅತ್ತ ವಾಸುದೇವಃ ಸರ್ವಂ (೭.೧೯) ಎಂಬ ಭಾವವು ನೆಲೆಗೊಂಡ ಭಕ್ತನು ಕೃಷ್ಣಾರ್ಪಣ

ಬುದ್ಧಿಯಿಂದ ಸತತ ಕರ್ಮವನ್ನಾಚರಿಸುವನು. ಇಬ್ಬರೂ ಲೋಕಸಂಗ್ರಹಾರ್ಥವಾಗಿ ಕರ್ಮಚಕ್ರವನ್ನು ನಡೆಸುವರು. ಮಾಮನುಸ್ಮರ ಯುಧ್ಯ ಚ (೮.೭) 'ನನ್ನನ್ನು ಸ್ಮರಿಸು ಮತ್ತು ಯುದ್ಧಮಾಡು,' ಎಂದು ಶ್ರೀಕೃಷ್ಣನು ಅರ್ಜುನನಿಗೆ ಭಕ್ತಿ ಮತ್ತು ಯುದ್ಧದಂಥ ಘೋರ ಸ್ವಕರ್ಮ ಇವೆರಡನ್ನು ಒಮ್ಮೆಲೆ ಮಾಡು ಎಂಬುವಲ್ಲಿ ಹೇಳುವನು; ಕೊನೆಯ ಅಧ್ಯಾಯದಲ್ಲಿ ಸ್ವಕರ್ಮಣಾ ತಮಭ್ಯರ್ಚ್ಯ (೧೮.೪೬) 'ಮನುಷ್ಯನು ಸ್ವಕರ್ಮದಿಂದಲೆ ಈಶ್ವರನನ್ನು ಪೂಜಿಸಿ' ಸಿದ್ಧಿಯನ್ನು ಪಡೆಯುವನು ಎಂಬ ವಚನವಿದೆ; ಭಕ್ತಿಯಾದರೂ ಅನಾಸಕ್ತಿಯಂತೆ ಅಂತಃಕರಣದ ಸ್ಥಾಯೀ ಭಾವವಿರುವದು ಮತ್ತು ತದನುಸಾರವಾಗಿ ಸ್ವಕರ್ಮಮಾಡುವುದೆ ನಿಜಭಕ್ತಿಯು ಹೊರತು ಕೇವಲ ತಾಲಮೃದಂಗಾದಿಗಳ ಸಹಾಯದಿಂದ ಅಥವಾ ತುಲಸೀಮಣಿಗಳ ಆವರ್ತನಗಳಿಂದ ಚಿತ್ತವನ್ನು ಏಕೀಕರಿಸಿ ಸ್ತಬ್ಧರಾಗಿ ಕೂಡುವದು ನಿಜಭಕ್ತಿಯಲ್ಲ. ಪರಮಾತ್ಮನ ಸರ್ವವ್ಯಾಪಿತ್ವವನ್ನನುಭವಿಸಿ ಅವನಿಗೆ ಎಲ್ಲವನ್ನು ಅರ್ಪಿಸುತ್ತ ಮಾಡಿದ ಸ್ವಕರ್ಮವೆ ಉತ್ತಮ ಭಕ್ತಿಯೆನಿಸುವದು, ಎಂದು ಗೀತೆಯ ಮತವು.

### ೯೩ ಕರ್ಮಪರಾಯಣವಾದ ಭಕ್ತಿಮಾರ್ಗವು

ಭಕ್ತಿಮಾರ್ಗವು ರಾಜಮಾರ್ಗವೆನಿಸುವದು. ಅದು ಸುಲಭವಿದ್ದರೂ ಶ್ರೇಷ್ಠವಿರುವದು. ಅದನ್ನಾಶ್ರಯಿಸುವವರಿಗೆ ಯಾವ ಅಡಚಣಿಗಳೂ ಇಲ್ಲ. ಸಾಧಕನು ಯಾವದೇ ಕುಲಶೀಲದವನಿರಲಿ, ಯಾವದೇ ಮತಪಥದವನಿರಲಿ,

ಯಾವದೇ ದೇಶಕಾಲದವನಿರಲಿ, ಯಾವದೇ ವಯಸ್ಸಿನವನಿರಲಿ, ಗಂಡಿರಲಿ ಹೆಣ್ಣಿರಲಿ,ಎಲ್ಲರಿಗೂ ಈ ಮಾರ್ಗದಲ್ಲಿ ಸಮಾನ ಅಧಿಕಾರವಿರುವದು. ಆತ್ಮಾನುಭವದ ಅನೇಕ ಮಾರ್ಗಗಳಿರುವವು, ಆದರೆ ಅವೆಲ್ಲವುಗಳನ್ನು ದಾಟಿದ ಧರ್ಮವೊಂದಿರುವದು. ಅದಾವುದೆಂದರೆ ನನಗೊಬ್ಬನಿಗೆ ಶರಣಾಗತನಾಗುವದು,ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ (೧೮.೬೬) ಎಂದು ಶ್ರೀಕೃಷ್ಣನು ತನ್ನ ಸಾರಭೂತವಾದ ಉಪದೇಶವನ್ನು ಗೀತೆಯ ಉಪಸಂಹಾರದಲ್ಲಿ ಉಸುರಿರುವನು. ಅರ್ಜುನನು ಅದನ್ನು ಸ್ವೀಕರಿಸಿ ಸ್ವಕರ್ಮದಲ್ಲಿ ಅಭಯಚಿತ್ತದಿಂದ ಪ್ರವೃತ್ತನಾಗಿರುವನು. ಅರ್ಜುನನ ಮುಖಾಂತರವಾಗಿ ತ್ರಿಖಂಡಕ್ಕೆ ಮತ್ತು ತ್ರಿಕಾಲದಲ್ಲಿ ಈ ಉಪದೇಶವು ಯೋಗಸಿದ್ಧ ಶ್ರೀಕೃಷ್ಣನಿಂದ ಮಾಡಲ್ಪಟ್ಟಿರುವದು. ಇದಲ್ಲದೆ ಈ ಮಾರ್ಗವನ್ನು ಸ್ವೀಕರಿಸುವವರಿಗೆ ಶ್ರೀಕೃಷ್ಣನು ಪರಮಪದದ ಆಶ್ವಾಸನವನ್ನೂ ಕೊಟ್ಟಿರುವನು;

> ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।
> ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥
>
> (೧೮.೫೬)

'ನನ್ನ ಆಶ್ರಯದಿಂದ ಎಲ್ಲ ಕರ್ಮಗಳನ್ನು ಮಾಡುತ್ತಿರುವವನು ಸಹ ನನ್ನ ಪ್ರಸಾದದ ಮೂಲಕ ಶಾಶ್ವತ ಪದವನ್ನು ಪಡೆಯುವನು; ಅದೇರೀತಿ,

> ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
> ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥
>
> (೧೧.೫೫).

'ಎಲ್ಲ ಕರ್ಮಗಳನ್ನು ನನ್ನವೆಂದು ಮಾಡುವವನು, ಮತ್ಪರಾಯಣನು, ನಿರ್ವೈರನೂ ನಿಃಸ್ಸಂಗನೂ ಆದ ನನ್ನ ಭಕ್ತನು, ನನ್ನನ್ನೆ ಬಂದು ಕೂಡುವನು.' ಭಕ್ತಿಭಾವಪೂರ್ಣರಾಗಿ ಅರ್ಥಾತ್ ಕೃಷ್ಣಾರ್ಪಣಪೂರ್ವಕ ಸ್ವಕರ್ಮಗಳನ್ನು ಮಾಡಬೇಕು, ಎಂಬ ಬಗ್ಗೆ ಈ ಪ್ರಕಾರ ಗೀತೆಯಲ್ಲಿ ನಿಃಸಂದಿಗ್ಧ ವಚನಗಳಿರುವವು. ಗೀತೆಯು ಈ ಪರಿ ಸಾಮಾನ್ಯರಿಗೂ ಸುಕರವಾದ ಕರ್ಮಪರಾಯಣ ಭಕ್ತಿಮಾರ್ಗವನ್ನು ಹೇಳಿ ನಿರ್ಬುದ್ಧರಿಗೆ ಸಹ ಆತ್ಮಾನುಭವದ ಸೋಪಾನದ್ವಾರವನ್ನು ತೆರೆದು ಬಿಟ್ಟಿರುವದು.

## ೧೨ ಗೀತೆಯಲ್ಲಿ ಬಂದ ವಿಚಾರಗಳ ಕ್ರಮವು

### ೯೮ ಗೀತೆಯ ಉಪಪಾದನ ಕ್ರಮವು

ಗೀತೆಗೆ ಪ್ರಶಸ್ತವಾದ ಮತ್ತು ಗೀತೆಯ ಮುಖ್ಯ ವಿಷಯವಾದ ಕರ್ಮಯೋಗದ ವಿವೇಚನೆಯು ಇಲ್ಲಿಗೆ ಮುಗಿಯಿತು. ಈಶ್ವರಾರ್ಪಣಪೂರ್ವಕವಾಗಿ ಮತ್ತು ಅನಾಸಕ್ತಿಯಿಂದ ಸ್ವಕರ್ಮ ಮಾಡುತ್ತಿರುವ ಸಾಧಕನಿಗೆ ಸರ್ವಾತ್ಮೈಕ್ಯ ಹಾಗೂ ಸಾಮ್ಯಬುದ್ಧಿ ಇವುಗಳು ಸಮಸಂದು ಸಿದ್ಧಿಯು ಕೈಸೇರುವುದು. ಸಿದ್ಧಿಯ ನಂತರ ಸ್ವಂತಕ್ಕಾಗಿ ಪ್ರಾಪ್ತವ್ಯವೆಂಬುದೇನೂ ಉಳಿಯದಿದ್ದರೂ ಲೋಕಸಂಗ್ರಹಾರ್ಥವಾಗಿ ಸ್ವಕರ್ಮದಲ್ಲಿ ಮೊದಲಿನಂತೆ ನಿರತನಿರುವವನು ನಿಜವಾದ ಕರ್ಮಯೋಗಿಯು, ಎಂಬುದನ್ನು ಇದುವರೆಗೆ ತಿಳಿದುಕೊಂಡೆವು. ಈ ಮಾರ್ಗವು ಎಲ್ಲ ಆಬಾಲವೃದ್ಧರಿಗೂ ಗ್ರಹಣಸುಲಭವು ಹಾಗೂ ಆಚರಣಯೋಗ್ಯವು. ಈ ಮಾರ್ಗದ ಪ್ರತಿಪಾದನವು ಈ ನಮ್ಮ ಪುಸ್ತಕದಲ್ಲಿ ಯಾವ ಕ್ರಮದಿಂದಿರುವದೋ ಅದಕ್ಕೂ ಬೇರೆ ಕ್ರಮದಿಂದ ಗೀತೆಯಲ್ಲಿ ಬಂದಿರುವದು. ಇದರ ಕಾರಣವೇನಂದರೆ, ಗೀತೆಯು ಸಂವಾದ ಪದ್ಧತಿಯನ್ನು ಸ್ವೀಕರಿಸಿದೆ. ಶ್ರೀಕೃಷ್ಣಾರ್ಜುನರು ಎದುರು ಬದುರು ಕುಳಿತು ಪ್ರಶ್ನೋತ್ತರರೂಪದಿಂದ ಸಂಭಾಷಣೆ ಮಾಡುವಾಗ ಕರ್ಮಯೋಗದ ತತ್ವಜ್ಞಾನಕ್ಕೆ ಮೂರ್ತ ಸ್ವರೂಪವು ಬಂದಿದೆ. ಹೇಳುವವ ಕೇಳುವವರಿಬ್ಬರೂ

ಶ್ರೇಷ್ಠರೂ ಪಂಡಿತರೂ ಇರುವುದರಿಂದ ಎಷ್ಟೋ ಸಂಗತಿಗಳು ಗೀತೆಯಲ್ಲಿ ಸಂಕ್ಷೇಪದಿಂದ ಬಂದು ಬಿಟ್ಟಿವೆ; ಆ ವಿವೇಚನ ಪದ್ಧತಿಯು ಸಂವಾದಾತ್ಮಕವಿರುವುದರಿಂದ ವಿಷಯಗಳು ಹಿಂದೆ ಮುಂದೆ ಆದಂತೆ ತೋರುತ್ತಿವೆ. ಆದರೆ ಇಡೀ ಗೀತೆ ಯಲ್ಲಿ ಅಸಂಬದ್ಧತೆಗೆ ಅಥವಾ ಅಸಂದಿಗ್ಧತೆಗೆ ಎಳ್ಳಷ್ಟು ಎಡೆ ಯಿಲ್ಲ. ಇಷ್ಟೇ ಅಲ್ಲ, ಅದರಲ್ಲಿಯ ಮಂಡನವು ತಾತ್ವಿಕವೂ ಶಾಸ್ತ್ರೀಯವೂ ಪೂರ್ಣವೂ ಇದ್ದು ಅನುಭವಸಿದ್ಧವಿರುವುದ ರಿಂದ ಮನಗಾಣಿಸುವಂತಹದಿರುವದು. ಗೀತೆಯು ರೀತಿ ಯಂತೆ ಸಾಗಿದರೂ ಕರ್ಮಯೋಗವೆಂಬ ತಾತ್ಪರ್ಯವು ಅಷ್ಟೇ ಸ್ಪಷ್ಟರೀತಿಯಿಂದ ಸ್ಫುಟವಾಗುವದು. ಗೀತೆಯ ಕ್ರಮವು ಹೇಗಿರುವದೆಂಬುದನ್ನು ನೋಡುವ.

## ೯೫ ವಿಷಾದಯೋಗವು

ಶ್ರೀಕೃಷ್ಣಾರ್ಜುನರೆಂಬ ಎರಡು ಪರಾಕ್ರಮಿ ಪರಮ ಮಿತ್ರರು ಭಾರತೀಯುದ್ಧಾರಂಭದಲ್ಲಿ ಕಾಳಗದ ಕಣದಲ್ಲಿ ಮಾಡಿದ ಶ್ರೇಯಸ್ಕರ ಸಂವಾದವೆ ಗೀತೆಯೆಂಬ ರೂಪವನ್ನು ಧರಿಸಿದೆ. ಹಂಗುದೊರೆದು ಹೋರಾಡಲು ಒಟ್ಟಾದ ಉಭಯ ದಲದ ಅನೇಕ ಸಂಬಂಧಿಕರನ್ನೂ ಪೂಜ್ಯರನ್ನೂ ನೋಡಿ, ಇನ್ನು ಇವರು ರಣಕ್ಕೆ ಬಲಿಯಾಗುವರಲ್ಲ, ಎಂಬ ಕಲ್ಪನೆಯು ಅರ್ಜುನನ ಮನದಲ್ಲಿ ತಲೆದೋರುವುದು. ಕುಲನಾಶವು ಅವನ ಕಣ್ಣಮುಂದೆ ಕಟ್ಟುವುದು. ಅದರಿಂದ ಅವನಲ್ಲಿ ಕರುಣೆ, ಕಾರ್ಪಣ್ಯ, ಕನಿಕರವು ಹುಟ್ಟಿ ಅವನು ಕ್ಷಾತ್ರಧರ್ಮ ವನ್ನು ಬಿಟ್ಟು ಯುದ್ಧಭೂಮಿಯಿಂದ ನಿವೃತ್ತನಾಗಬೇಕೆನ್ನು

ವನು, ಶೋಕಸಂತಪ್ತನಾಗಿ ಗಾಂಡೀವ ಚಲ್ಲಿ ವ್ಯಾಕುಲ ಚಿತ್ತದಿಂದ ರಥದಲ್ಲಿ ಕೂಡುವನು. ಇದು ಮೊದಲನೇ ಅಧ್ಯಾಯದ ವಿಷಯವು. ಅರ್ಜುನನ ವಿಷಾದವೆ ಇಲ್ಲಿ ಮುಖ್ಯವಾದುದರಿಂದ ಈ ಅಧ್ಯಾಯಕ್ಕೆ 'ಅರ್ಜುನ ವಿಷಾದ ಯೋಗ' ಎಂಬ ಹೆಸರು ಇರುವದು. ಇದೇ ಧೋರಣದಿಂದ ಆಯಾ ಅಧ್ಯಾಯಗಳಲ್ಲಿಯ ಮುಖ್ಯ ವಿಷಯಕ್ಕನುಸರಿಸಿ ಗೀತೆಯ ಆಯಾ ಅಧ್ಯಾಯಗಳಿಗೆ ಹೆಸರುಗಳು ಕೊಡಲ್ಪಟ್ಟಿವೆ.

### ೯೬ ಸಾಮ್ಯಬುದ್ಧಿಯುಳ್ಳ ಕರ್ಮಯೋಗಿಯು

ಅರ್ಜುನನ ಈ ಕರುಣಾಸ್ಪದ ಸ್ಥಿತಿಯನ್ನು ನೋಡಿ, ಶ್ರೀಕೃಷ್ಣನು ಅಚ್ಚರಿಬಡುವನು, ಅವನ ಪೂರ್ವಪರಾಕ್ರಮದ ನೆನಪನ್ನು ಕೊಟ್ಟು ಅವನನ್ನು ಪ್ರೋತ್ಸಾಹಿಸುವನು, ಹೃದಯ ದೌರ್ಬಲ್ಯವನ್ನು ಬೀಸಾಡಲು ಉಪದೇಶಿಸುವನು. ಆದರೂ ಗುರುವಧಾದಿಗಳ ಘೋರ ಚಿತ್ರವು ಅರ್ಜುನನ ಕಣ್ಣಮುಂದಿನಿಂದ ಕದಲದೆ ಹೋಗುವದು. ಘಾತಕ ಯುದ್ಧಕರ್ಮದಲ್ಲಿ ಅವನಿಗೆ ಯಾವ ಶ್ರೇಯಸ್ಸೂ ಕಾಣದೇ ಹೋಗುವದು ಮತ್ತು ಅದನ್ನು ಬಿಟ್ಟು ಸನ್ಯಾಸವನ್ನು ಆಶ್ರಯಿಸುವುದು ಯೋಗ್ಯವೆಂದು ಅವನು ಭಾವಿಸುವನು. ತನ್ನ ಕಾರ್ಪಣ್ಯವನ್ನೂ ಧರ್ಮಸಂಮೂಢತೆಯನ್ನೂ ಕೃಷ್ಣನೆದುರಿಗಿಟ್ಟು ಅರ್ಜುನನು ಅವನಿಗೆ ಶರಣಾಗತನಾಗುವನು. ಕರ್ಮ ಪ್ರವೃತ್ತನಾದ ಅರ್ಜುನನು ಕರ್ಮನಿವೃತ್ತನಾಗಲು ಸಿದ್ಧನಾಗಿ 'ಕರ್ಮ ಮಾಡಬೇಕೊ ಬಿಡಬೇಕೊ' ಎಂಬ ಪ್ರಶ್ನೆಯನ್ನು ಹೊಸದಾಗಿ ಎತ್ತುವನು. ಶ್ರೀಕೃಷ್ಣನು ಸಾಂಖ್ಯ

ಮತ್ತು ಯೋಗ ಈ ಎರಡು ರೀತಿಗಳಿಗನುಸರಿಸಿ ಕರ್ಮ ಮಾಡು—ಕುರುಕರ್ಮ (೪.೧೫)—ಎಂಬ ಒಂದೇ ನಿರ್ಣಯು ವನ್ನು ಹೇಳುವನು. ಸ್ವಧರ್ಮದಂತೆ ಕರ್ಮಮಾಡುತ್ತಿರಲು ವಿರಕ್ತಿಯುಂಟಾದೊಡನೆ ಆತ್ಮಾನುಭವಾರ್ಥವಾಗಿ ಕರ್ಮ ತ್ಯಾಗ ಮಾಡಿ ಸಾಧಕನು ಧ್ಯಾನನಿಮಗ್ನನಾಗಲು ಯತ್ನಿಸು ವದೆ ಸಾಂಖ್ಯಮಾರ್ಗವು. ಆದರೆ ಆತ್ಮಾನುಭವ ಹಾಗೂ ವಿರಕ್ತಿ ಇವು ಉಂಟಾಗುವ ಮೊದಲು ಮತ್ತು ನಂತರ ಕರ್ಮತ್ಯಾಗ ಮಾಡದೆ ಸಾಧಕನು ಸದೈವ ಸ್ವಕರ್ಮಪರಾ ಯಣನಿರುವದು ಯೋಗಮಾರ್ಗವು. ದೇಹವಳಿದರೂ 'ಅಜ ಅಮೃತನಿರುವ ಆತ್ಮನು ಅಳಿಯನು, ಆದುದರಿಂದ ಮರಣ ಶೋಕವು ವ್ಯರ್ಥವು. ಸಂಸಾರದ ಸುಖದುಃಖಗಳು ಭಂಗುರ ವಿದ್ದು ಅವು ಬರುವವು ಮತ್ತು ಹೋಗುವವು. ಅವುಗಳ ವಿಷ ಯದಲ್ಲಿ ಮನುಷ್ಯನು ಸಮಚಿತ್ತನಾಗಿರುವದು ಯೋಗ್ಯವು. ಮತ್ತು ಆತ್ಮಾನುಭವವನ್ನು ಪಡೆಯುವಗೋಸುಗ ನಿಷ್ಕಾಮ ನಾಗಿ ಸ್ವಕರ್ಮವನ್ನಾಚರಿಸುತ್ತಿರುವುದು ಅವಶ್ಯಕವು. ಕ್ಷತ್ರಿಯರು ತಮಗೆ ಪ್ರಾಪ್ತವಾದ ಯುದ್ಧಕರ್ಮವನ್ನು ಬಿಟ್ಟರೆ ಕರ್ತವ್ಯಚ್ಯುತಿಯ ದೋಷವು ಬರುವದು, ಎಂದು ಮುಂತಾಗಿ ಶ್ರೀಕೃಷ್ಣನು ಹೇಳುವನು. ಆದರೆ ವೈರಾಗ್ಯವು ಹುಟ್ಟಿದೊಡನೆ ಕರ್ಮವನ್ನು ಬಿಟ್ಟು ಸನ್ಯಾಸವನ್ನು ಸ್ವೀಕರಿಸ ಬೇಕು ಎಂದು ಸಾಂಖ್ಯಮತವಿರುವದರಿಂದ ಉಪರತಿಯು ಆದ ಬಳಿಕ ಸಹ ಯಾಕೆ ಕರ್ಮ ಮಾಡಬೇಕು, ಎಂಬುದರ ಉಪಪತ್ತಿಯು ಸಾಂಖ್ಯಮಾರ್ಗದಂತೆ ಚನ್ನಾಗಿ ಹತ್ತುವು

ದಿಲ್ಲ. ಆದುದರಿಂದ ಶ್ರೀಕೃಷ್ಣನು ಕರ್ಮಯೋಗವನ್ನು ಉಪದೇಶಿಸಲು ಪ್ರಾರಂಭ ಮಾಡುವನು: 'ಯೋಗದ ಅಲ್ಪಾಚರಣೆಯು ಕೂಡ ಸಾಧಕನನ್ನು ಮಹಾ ಭಯದಿಂದ ರಕ್ಷಿಸುವುದು. ಆ ಮಾರ್ಗದಲ್ಲಿ ನಿಶ್ಚಯಾತ್ಮಕ ಬುದ್ಧಿಯು ಸ್ಥಿರವೂ ಸಮವೂ ಇರಲಿಕ್ಕೆ ಬೇಕು. ಹಾಗೆ ಇಲ್ಲದ ಪಕ್ಷಕ್ಕೆ ಮನಸಿನಲ್ಲಿ ಅನೇಕ ಕಾಮನೆಗಳ ಗೊಂದಲವೆದ್ದು ಅವುಗಳ ತೃಪ್ತಿಗಾಗಿ ಕಾಮ್ಯಕರ್ಮಗಳಲ್ಲಿ ಸಿಲುಕಿ ಬೀಳಬೇಕಾಗುತ್ತಿದೆ. ಅದರಿಂದ ಚಂಚಲ ಸುಖವು ಮಾತ್ರ ದೊರಕಬಲ್ಲದು. ಆದರೆ ಸಾಧಕನು ನಿಷ್ಕಾಮನಾದನೆಂದರೆ ಆತ್ಮಸುಖವು ಉಂಟಾಗಿ ಕಾಮ್ಯಸುಖದ ಅಭಿಲಾಷೆಯು ಹಿಂಗಿಹೋಗುವದು. ಕರ್ಮಮಾಡುವುದೆ ಮನುಷ್ಯನ ಅಧಿಕಾರವು ಹೊರತು ಅದನ್ನು ಬಿಡುವುದು ಅವನ ಅಧಿಕಾರದಲ್ಲಿಲ್ಲ; ಅದರ ಫಲವೂ ಅವನಧೀನವಿಲ್ಲ, ಅಂದಬಳಿಕ ಅದರ ಆಶೆ ಆಸಕ್ತಿಗಳಾದರೂ ಅವನಿಗೆ ಏಕೆ? ಕರ್ಮಧರ್ಮದ ಪ್ರಕಾರ ಅಥವಾ ಈಶ್ವರೇಚ್ಛೆಯಂತೆ ಕರ್ಮಫಲವು ಆಗುವದು. ಅದರ ಬಗ್ಗೆ ಆಸಕ್ತಿ ಇಲ್ಲದಿದ್ದರೆ ಬುದ್ಧಿಯು ಫಲಾಫಲಗಳಿಂದ ಹಿಗ್ಗದೆ ಕುಗ್ಗದೆ ಸಮ ಉಳಿಯುವುದು. ಈ ಪರಿಯ ಬುದ್ಧಿಯ ಸಮತೆಯೆ ಯೋಗವೆನಿಸುವುದು. ಕಾಮ್ಯಬುದ್ಧಿಯಿಂದ ಮಾಡಿದ ಕರ್ಮವು ಸಾಮ್ಯಬುದ್ಧಿಯಿಂದ ಮಾಡಿದ ಕರ್ಮಕ್ಕಿಂತ ಹೀನವು, ಆದುದರಿಂದ ಈ ಬುದ್ಧಿಯೋಗವನ್ನು ಆಶ್ರಯಿಸುವುದು ಲೇಸು. ಯೋಗಮಾರ್ಗದಲ್ಲಿ ಕರ್ಮಮಾಡುವ ಕುಶಲತೆಯು ಉಂಟಾಗುವುದು, ಮತ್ತು ಬಳಿಕ ಪರಮ

ಸುಖವು ಸುಲಭಸಾಧ್ಯವಾಗುವದು.' ಅರ್ಜುನನು ಸಮ
ಬುದ್ಧಿಯ ಈ ಮಹತ್ವವನ್ನು ಕೇಳಿ ಅದನ್ನು ಪ್ರಾಪ್ತಮಾಡಿ
ಕೊಂಡವನ ಮನ ವಚನ ಕರ್ಮಗಳು ಹೇಗೆ ಇರುವವು,
ಎಂಬುದನ್ನು ತಿಳಿಯಲಿಚ್ಛಿಸುವನು. ಶ್ರೀಕೃಷ್ಣನು ಸ್ಥಿತಪ್ರಜ್ಞ
ಕರ್ಮಯೋಗಿಯ ಸವಿಸ್ತರ ವರ್ಣನೆಯನ್ನು ಮಾಡುವನು
ಮತ್ತು ಆ ಬಳಿಕ ಎರಡನೆಯ ಅಧ್ಯಾಯವು ಮುಗಿಯುವದು.

### ೯೭ ಅನಾಸಕ್ತ ಕರ್ಮವು

ಮೇಲಿನ ಉಪದೇಶದಿಂದ ಅರ್ಜುನನ ಪೂರ್ಣ ಸಮಾ
ಧಾನವಾಗಲಿಲ್ಲ. 'ಕರ್ಮಕ್ಕಿಂತ ಬುದ್ಧಿಯು ಶ್ರೇಷ್ಠವಿದ್ದರೆ
ನನ್ನನ್ನು ನೀನು ಕರ್ಮದಲ್ಲಿ ಯಾಕೆ ನೂಕುತ್ತೀ? ನನಗೆ
ಯಾವುದಾದರೊಂದು ನಿಶ್ಚಯದಿಂದ ಹೇಳು' ಎಂದು ಅರ್ಜು
ನನು ಅನ್ನುವನು. ಸಮಬುದ್ಧಿಯೆ ಶ್ರೇಷ್ಠವಿದ್ದಪಕ್ಷಕ್ಕೆ ಅದು
ಪ್ರಾಪ್ತವಾದಬಳಿಕ ಸಹ ಏಕೆ ಕರ್ಮ ಮಾಡಬೇಕು, ಎಂಬು
ದಕ್ಕೆ ಸಮರ್ಪಕ ಉತ್ತರವನ್ನು ಕೊಟ್ಟು ಶ್ರೀಕೃಷ್ಣನು ಅರ್ಜು
ನನನ್ನು ಕರ್ಮಪ್ರವೃತ್ತನನ್ನಾಗಿ ಮಾಡುವನು. ಸಾಂಖ್ಯ
ಮತ್ತು ಯೋಗ ಎಂಬ ಎರಡು ನಿಷ್ಠೆಗಳಿರುವವು; ಆದರೆ
ಕರ್ಮಾರಂಭ ಮಾಡದೆ ಅಥವಾ ಕೇವಲ ಕರ್ಮತ್ಯಾಗದಿಂದ
ಸಿದ್ಧಿಯು ದೊರೆಕೊಳ್ಳದು. ಕರ್ಮವಿಲ್ಲದೆ ಒಂದು ಕ್ಷಣವು
ಸಹ ಕಳೆಯದು, ಪ್ರಕೃತಿಯು ಯಾರನ್ನೂ ಬಿಡದು, ಎಲ್ಲರಿಂ
ದಲೂ ಕರ್ಮವನ್ನು ಮಾಡಿಸುವದು. ಹೀಗಿರುವಾಗ ಕೇವಲ
ಹಟದಿಂದ ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಮನಸನ್ನು
ಇಂದ್ರಿಯ ವಿಷಯಗಳಲ್ಲಿ ಹರಿಯಗೊಟ್ಟರೆ ಅದು ಮಿಥ್ಯಾಚಾರ

ವೆನಿಸುವದು; ಅದಕ್ಕಿಂತ ಮನಸಿನಿಂದ ಇಂದ್ರಿಯಗಳನ್ನು ಸಂಯಮಿಸಿ ಕರ್ಮ ಮಾಡುತ್ತಿರುವದು ಯೋಗ್ಯವು. ಕರ್ಮ ಬಿಡುವುದಕ್ಕಿಂತ ಕರ್ಮ ಮಾಡುವದು ಲೇಸು, ಕರ್ಮಬಿಟ್ಟರೆ ಶರೀರಯಾತ್ರೆಯು ಸಹ ಸಫಲವಾಗದು; ಆಸಕ್ತಿಯಳಿಸಿ ಕರ್ಮಮಾಡಿದರೆ ಅದರ ಬಂಧನವಾಗದು. ಕರ್ಮವು ಬ್ರಹ್ಮ ನಿರ್ಮಿತವು, ಸರ್ವಕರ್ಮದಲ್ಲಿ ಬ್ರಹ್ಮನು ಪ್ರತಿಷ್ಠಿತನು. ಪುರು ಷನಿಗೆ ಜ್ಞಾನವಾದ ಬಳಿಕ ಅವನು ತನಗಾಗಿ ದೊರಕಿಸುವ ದೆಂಬುದೇನೂ ಉಳಿಯುವದಿಲ್ಲ. ಆದರೆ ಕರ್ಮತ್ಯಾಗವು ಅಶಕ್ಯ ವಿರುವದರಿಂದ ಆ ನಿಸರ್ಗವಿರುದ್ಧ ಪ್ರತಿಗಾಮಿ ಧೋರಣ ವನ್ನು ಸ್ವೀಕರಿಸದೆ ಲೋಕಸಂಗ್ರಹಾರ್ಥವೆಂದು ಕರ್ಮ ಮಾಡುವುದೆ ಉತ್ತಮ. ಪೂರ್ವದಲ್ಲಿ ಜನಕಾದಿ ಶ್ರೇಷ್ಠರು ಇದೇ ಸಾಧನದಿಂದ ಪರಮ ಪದವಿಯನ್ನು ಪಡೆದರು. ಶ್ರೇಷ್ಠ ರನ್ನನುಸರಿಸುವದು ಜನತೆಯ ಸ್ವಭಾವವಿರುವದು. ನಾನು ಸ್ವತಃ ಏನನ್ನೂ ಇಚ್ಛಿಸುವದಿಲ್ಲ. ಆದರೂ ನಾನು ಕರ್ಮ ಮಾಡುವೆನು. ಹಾಗೆ ನಾನು ಮಾಡದೆ ಹೋದರೆ ಲೋಕ ನಾಶವಾಗುವದು. ಜ್ಞಾನಿಗಳು ತಾವು ಕರ್ಮಬಿಟ್ಟು ಅಜ್ಞಾನಿ ಗಳಲ್ಲಿ ಬುದ್ಧಿಭೇದವನ್ನುಂಟು ಮಾಡಕೂಡದು. ಆಸಕ್ತಿ ಬಿಟ್ಟು ಲೋಕಹಿತಕ್ಕಾಗಿ ಕರ್ಮಮಾಡುತ್ತಲೆ ಇರಬೇಕು. ಪ್ರಕೃತಿ ಜನ್ಯವಾದ ಈ ದೇಹವು ಇರುವವರೆಗೆ ಜ್ಞಾನಿಗೂ ಕರ್ಮವು ಬಿಟ್ಟದ್ದಲ್ಲ; ಸ್ವಕರ್ಮ ಮಾಡುತ್ತಿರುವದೆ ಶ್ರೇಯಸ್ಕರವು, ಹಾಗೆ ಮಾಡುವಾಗ ಮರಣವು ಬಂದರೂ ಅದನ್ನು ಆನಂದ ದಿಂದ ಸ್ವಾಗತಿಸಬೇಕು. ಬಳಿಕ, ಮನುಷ್ಯನ ಇಚ್ಛೆ ಇರಲಿ

ಇರದಿರಲಿ, ಅವನಿಗೆ ಪಾಪಕರ್ಮದ ಪ್ರೇರಣೆಯು ಏಕೆ ಆಗು ವದು, ಎಂಬ ಪ್ರಶ್ನೆಯನ್ನು ಅರ್ಜುನನು ಕೇಳಲು 'ಕಾಮ ಕ್ರೋಧಗಳು ಮನವನ್ನು ಮಲಿನ ಮಾಡುವವು. ಅವುಗಳನ್ನು ಸಂಯಮಿಸಬೇಕು,' ಎಂದು ಶ್ರೀಕೃಷ್ಣನು ಉತ್ತರವನ್ನು ಕೊಟ್ಟಿರುವನು. ಕರ್ಮವು ನೈಸರ್ಗಿಕವಿರುವದು, ಅದರ ತ್ಯಾಗವು ಅಶಕ್ಯವು, ಅನಾಸಕ್ತಿಪೂರ್ವಕ ಕರ್ಮಾಚರಣೆಯೇ ಉತ್ತಮ ಮಾರ್ಗವು, ಎಂಬುದೆ ಈ ಅಧ್ಯಾಯದ ಸಾರವು.

### ೯೮ ನಿಷ್ಕಾಮಯುದ್ಧಕ್ಕೆ ಪ್ರೋತ್ಸಾಹನೆ

ನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಕರ್ಮ ಯೋಗವನ್ನು ಮತ್ತಿಷ್ಟು ಬಲಗೊಳಿಸುವನು. ಆ ಯೋಗದ ಪ್ರಾಚೀನತೆ ಮತ್ತು ಪರಂಪರೆ ಇವುಗಳನ್ನು ಹೇಳಿ ಅದನ್ನು ತಾನೇ ಮೊದಲು ವಿವಸ್ವಾನನಿಗೆ ಅಂದರೆ ಸೂರ್ಯನಿಗೆ ಉಪ ದೇಶಿಸಿದನು, ಎಂದು ಅರ್ಜುನನಿಗೆ ತಿಳಿಸುವನು. ಈಗ ತನ್ನೆ ದುರಿಗಿದ್ದ ಶ್ರೀಕೃಷ್ಣನು ಅಷ್ಟು ಪುರಾತನ ಕಾಲದಲ್ಲಿ ಸೂರ್ಯ ನಿಗೆ ಉಪದೇಶ ಮಾಡಿದ ಬಗೆ ಹೇಗೆ, ಎಂಬ ಸಂಶಯವನ್ನು ಪಾರ್ಥನು ಮುಂದೆ ಮಾಡುವನು. ಆಗ ತನ್ನ ದಿವ್ಯ ಜನ್ಮ- ಕರ್ಮಗಳನ್ನು ವರ್ಣಿಸಿ, 'ಸಾಧುಗಳ ಸಂರಕ್ಷಣ, ದುಷ್ಟರ ದಮನ, ಮತ್ತು ಧರ್ಮಸಂಸ್ಥಾಪನ ಇವುಗಳಿಗಾಗಿ ನಾನು ಅವತಾರ ತಾಳುವೆನು ಮತ್ತು ಯುಗಕರ್ಮವನ್ನು ಮಾಡು ವೆನು. ನಾನು ನಿಸ್ಪೃಹನಿರುವದರಿಂದ ಆ ಕರ್ಮದ ಬಂಧನವು ನನಗೆ ಆಗುವದಿಲ್ಲ. ನನ್ನಂತೆ ಅನಾಸಕ್ತರಾಗಿ ಕರ್ಮಮಾಡುವ ಮರ್ಮವನ್ನರಿತ ಅನೇಕ ಪುರುಷರು ಸಿದ್ಧಿಯನ್ನು ಪಡೆದಿರು

ವರು. ನೀನೂ ಅವರನ್ನು ಹಿಂಬಾಲಿಸು. ಫಲಾಪೇಕ್ಷೆಯಿಲ್ಲದೆ ಸಮಭಾವದಿಂದ ಮಾಡಿದ ಕರ್ಮವು ಯಜ್ಞರೂಪವಿರುವದು ಯಜ್ಞಾರ್ಥ ಮಾಡಿದ ಕರ್ಮವು ಬಂಧಕವಾಗಲರಿಯದು. ಹೀಗೆ ಅನಾಸಕ್ತನಾಗಿ ಮಾಡಿದ ಕರ್ಮದಿಂದ, ಸರ್ವರಲ್ಲಿ ಒಂದೇ ಒಂದಾಗಿ ವ್ಯಾಪಿಸಿರುವ ಆತ್ಮನ ಜ್ಞಾನವಾಗಿ ಆತ್ಮ ಭಾವವು ಅಂಕುರಿಸುವದು. ಈ ಜ್ಞಾನದಂಥ ಪವಿತ್ರ ವಸ್ತುವು ಜಗತ್ತಿನಲ್ಲಿಲ್ಲ. ಆ ಜ್ಞಾನವನ್ನು ಬುದ್ಧಿ ಅಥವಾ ಶ್ರದ್ಧೆಯಿಂದ ಪಡೆದು ಫಲಾಶಾರಹಿತನಾಗಿ ಕರ್ಮಮಾಡುವ ಯೋಗಿಯು ಪರಮ ಸಿದ್ಧಿಯನ್ನು ಹೊಂದುವನು. ಕರ್ಮದ ಶುಭಾಶುಭ ಫಲಗಳು ಆತ್ಮವಂತನನ್ನು ಎಂದಿಗೂ ಕಟ್ಟಲಾರವು. ಆದುದ ರಿಂದ ನೀನು ಕರ್ಮಯೋಗವನ್ನು ಆಚರಿಸು, ಏಳು ಮತ್ತು ಯುದ್ಧಮಾಡು,' ಎಂದು ಅರ್ಜುನನನ್ನು ಕೃಷ್ಣನು ಕಾದಲು ಪ್ರೋತ್ಸಾಹಿಸುವನು.

### ೯೯ ಕರ್ಮಯೋಗದ ಶ್ರೇಷ್ಠತೆ

ಆದರೆ ಇದರಿಂದಲೂ ಅರ್ಜುನನ ಸನ್ಯಾಸಮೋಹವು ಹೋಗುವುದಿಲ್ಲ. ಅವನು ಕರ್ಮ ಮಾಡಲು ಸಿದ್ಧನಾಗುವ ದಿಲ್ಲ. ಪುನಃ ಶಂಕಾಶೀಲನಾಗಿ, ಕರ್ಮಯೋಗವು ಶ್ರೇಷ್ಠವೊ ಕರ್ಮಸನ್ಯಾಸವು ಶ್ರೇಷ್ಠವೊ, ಇದನ್ನು ನಿಶ್ಚಿತವಾಗಿ ತಿಳಿಯ ಲಿಚ್ಛಿಸುವನು. ಆಗ ಶ್ರೀಕೃಷ್ಣನು ಮತ್ತೆ, 'ಸನ್ಯಾಸ ಹಾಗೂ ಕರ್ಮಯೋಗ ಇವೆರಡೂ ಮೋಕ್ಷದಾಯಕವಿರುವವು. ಆದರೂ ಸನ್ಯಾಸಕ್ಕಿಂತ ಯೋಗವು ಶ್ರೇಷ್ಠವು. ಕರ್ಮಗಳನ್ನೆ ಬಿಟ್ಟುಬಿಡುವುದಕ್ಕಿಂತ ಫಲಕಾಮನೆಗಳನ್ನು ಬಿಟ್ಟು ಕರ್ಮ

ಮಾಡುವುದರಿಂದ ಸಾಧಕನು ತ್ವರೆಯಿಂದ ಮುಂದೆ ಸಾಗ ಬಲ್ಲನು ಮತ್ತು ಅದರಲ್ಲಿ ಶ್ರಮವೂ ಕಡಿಮೆ. ಆತ್ಮಭಾವವು ನೆಲೆಗೊಂಡವನನ್ನು ಕರ್ಮಕಲಂಕಗಳು ಮುಟ್ಟಲರಿಯವು. ನಡೆನುಡಿ, ಊಟಉಡಿಗೆ, ಜೀವನವು ಸಹ ಕರ್ಮವೇ ಇರುವದು. ಹೀಗಿರುವಾಗ ಕರ್ಮವನ್ನು ಬಿಡುವದಕ್ಕಿಂತ ಅದನ್ನು ಬ್ರಹ್ಮಾರ್ಪಣ ಪೂರ್ವಕ ಮಾಡುತ್ತಿರುವುದೆ ಶ್ರೇಯಸ್ಕರವು. ಈ ಸಾಧನದಿಂದ ಮನುಷ್ಯನು ಸಮದರ್ಶಿಯಾಗುವನು; ಬ್ರಹ್ಮೀಭೂತನಾಗಿ, ಅಂತಃಸುಖದ ಅಧಿಕಾರಿಯಾಗಿ ಮುಕ್ತನಾಗುವನು. ಬ್ರಹ್ಮೀಭೂತನು ಕರ್ಮ ಮಾಡುತ್ತಿದ್ದರೂ ಮುಕ್ತನೇ ಇರುವನು', ಎಂದು ಹೇಳುವನು.

### ೧೦೦ ಧ್ಯಾನಯೋಗದ ಸಹಾಯವು

ಆರನೆಯ ಅಧ್ಯಾಯದಲ್ಲಿಯೂ ಕರ್ಮಯೋಗ ವಿಷಯವೇ ಮುಂದೆ ಸಾಗಿರುವದು. ಸನ್ಯಾಸ–ಯೋಗಗಳನ್ನು ಹೋಲಿಸಿ ಶ್ರೀಕೃಷ್ಣನು ಅನ್ನುವುದೇನಂದರೆ, 'ಈ ಎರಡೂ ಮಾರ್ಗಗಳಲ್ಲಿ ಕಾಮನಾಸನ್ಯಾಸವು, ಆಸೆ ಬಿಟ್ಟು ನಿರಾಸೆಯಾಗುವದು ಅಗತ್ಯವು. ಕೇವಲ ಕರ್ಮ ಬಿಟ್ಟು ಯಾರೂ ಸನ್ಯಾಸವನ್ನು ಸಾಧಿಸರು, ಯೋಗವನ್ನು ಪಡೆಯರು. ಕಾಮನೆಗಳನ್ನು ಬಿಟ್ಟವರೆ ಸನ್ಯಾಸಿಗಳು ಮತ್ತು ಕರ್ಮಯೋಗಿಗಳು. ಮನುಷ್ಯನು ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳತಕ್ಕದ್ದು. ಅವನು ಸಂಯಮಿಯಾಗಿ ಸಮಬುದ್ಧಿಯನ್ನು ಹೊಂದಬೇಕು. ಚಿತ್ತವೃತ್ತಿನಿರೋಧವು, ಪಾತಂಜಲಯೋಗವು ಈ ಮಾತಿನಲ್ಲಿ ಸಹಾಯ ಮಾಡಬಲ್ಲದು.

ಬುದ್ಧಿಯು ಅಂತರ್ಮುಖವಾಯಿತೆಂದರೆ ಅತೀಂದ್ರಿಯ ಪರಮ ಸುಖದ ಅನುಭವವು ಆಗುವುದು. ಅದಕ್ಕೂ ಹೆಚ್ಚಿನದೇನೂ ಜಗತ್ತಿನಲ್ಲಿ ದೊರಕಿಸತಕ್ಕದ್ದಿಲ್ಲದ್ದರಿಂದ ಅದನ್ನು ಪಡೆದವನು ಕೃತಾರ್ಥನಾಗುವನು. ಯೋಗಿಯು ತನ್ನಲ್ಲಿಯೂ ಸರ್ವ ಭೂತಗಳಲ್ಲಿಯೂ ಒಂದೇ ಒಂದು ಆತ್ಮಭಾವವನ್ನನು ಭವಿಸುವನು ಮತ್ತು ಆತ್ಮೌಪಮ್ಯವನ್ನು ಹೊಂದುವನು. ಚಂಚಲ ಮನಸು ಮಂಗನಂತೆ ಜಿಗಿದಾಡಿದರೂ ಅದನ್ನು ಅವನು ಅಭ್ಯಾಸ-ವೈರಾಗ್ಯಗಳಿಂದ ವಶದಲ್ಲಿಟ್ಟುಕೊಳ್ಳುವನು. ಯೋಗಸಾಧನೆಯು ಎಂದೂ ನಿಷ್ಫಲವಾಗಲಾರದು, ಈ ಮಾರ್ಗದಲ್ಲಿ ನಿರಾಶೆಗೆ ಅವಕಾಶವಿಲ್ಲ. ಕಾಮ್ಯಕರ್ಮದಲ್ಲಿ ರತರಿರುವ ಕರ್ಮಠರಿಗಿಂತ, ತಪಸ್ವಿಗಳಿಗಿಂತ, ಸನ್ಯಾಸಿಗಳಿಗಿಂತ ಕರ್ಮಯೋಗಿಯೆ ಶ್ರೇಷ್ಠನು, ಆದುದರಿಂದ ನೀನೂ ಯೋಗಿಯಾಗು.' ಇಲ್ಲಿಗೆ ಆರನೆಯ ಅಧ್ಯಾಯವು ಮುಗಿಯುವದು.

### ೧೦೧ ಜ್ಞಾನವು ಮತ್ತು ಅದರ ಫಲವು

ನಿಷ್ಕಾಮ ಕರ್ಮಯೋಗಿಯು ಪಡೆಯತಕ್ಕ ಜ್ಞಾನವನ್ನು ಏಳನೇ ಅಧ್ಯಾಯದಿಂದ ಶ್ರೀಕೃಷ್ಣನು ಹೇಳಲಾರಂಭಿಸುವನು. ಅವನು ಹೇಳುವುದು 'ಪರಾ ಮತ್ತು ಅಪರಾ ಎಂದು ಈಶ್ವರನ ಎರಡು ಪ್ರಕೃತಿಗಳು. ಪರಾ ಇದು ಚೇತನಮಯವು, ಅಪರಾ ಇದು ಜಡಮಯವು. ಆ ಎರಡು ಪ್ರಕೃತಿಗಳ ಸಂಯೋಗದಿಂದ ಈ ಸೃಷ್ಟಿಯೆಲ್ಲವು ಆಗಿರುವುದು. ಈಶ್ವರನು ಜಗತ್ಕರ್ತನು, ಅವನಿಗಿಂತ ಹಿರಿದಾದುದೇನೂ ಇಲ್ಲ. ತ್ರಿಗುಣಾತ್ಮಕ ಪ್ರಕೃತಿಯ ಮೋಹದ ಮೂಲಕ ಜನರಿಗೆ ಈಶ್ವರನ

ಅವ್ಯಯ ಸ್ವರೂಪವು ಗೊತ್ತಾಗದೆ ಹೋಗುವುದು. ಆದರೆ ಭಕ್ತಿಯಿಂದ ಈ ಮಾಯೆಯನ್ನು ದಾಟಬಹುದು. ಭಕ್ತರಲ್ಲಿಯೂ ಅನನ್ಯಭಾವದಿಂದ ಭಜಿಸುವವನೂ ನಿಷ್ಕಾಮಕರ್ಮ ಮಾಡುವವನೂ ಜ್ಞಾನಿಯು ಮತ್ತು ಶ್ರೇಷ್ಠನು ಎಂದು ಎನಿಸುವನು. ಸಕಾಮ ಭಕ್ತರ ಪಾಲಿಗೆ ಭಂಗುರ ಸುಖವು ಬರುವದು, ನಿಷ್ಕಾಮ ಭಕ್ತರಿಗೆ ಸತ್ಯನಿತ್ಯ ಶಾಶ್ವತ ಸುಖವು ದೊರೆಯುವದು.'

### ೧೦೨ ಸತತ ಸ್ಮರಣ

ಎಂಟನೆಯ ಅಧ್ಯಾಯದಲ್ಲಿ ಜ್ಞಾನನಿರೂಪಣವನ್ನೆ ಮುಂದೆ ಸಾಗಿಸಿ ಶ್ರೀಕೃಷ್ಣನು ಅನ್ನುವುದೇನಂದರೆ, 'ಸಾಯುವಾಗ ಇದ್ದ ಭಾವನೆಯಂತೆ ಮುಂದಿನ ಗತಿಯು ಸಮನಿಸುವದು. ಆದರೆ ಆಯುಷ್ಯದಲ್ಲೆಲ್ಲ ಈಶಭಾವನೆ, ಈಶಭಕ್ತಿಯ ಅಭ್ಯಾಸ ಇವು ಇಲ್ಲದೆ ಹೋದರೆ ಕೊನೆಯ ಕಾಲಕ್ಕೆ ಒಮ್ಮೆಲೆ ಅವು ಎಲ್ಲಿಂದ ಒರಬೇಕು? ಆದುದರಿಂದ ಮನುಷ್ಯನು ಸತತ ಈಶ್ವರಸ್ಮರಣಪೂರ್ವಕ ಸ್ವಕರ್ಮ ಮಾಡುತ್ತಿರಬೇಕು. ಅನನ್ಯ ಭಾವದಿಂದ ಸತತ ದೇವರನ್ನು ನೆನೆಯುವ ಕರ್ಮಯೋಗಿಯು ಸುಲಭವಾಗಿ ಆತ್ಮಜ್ಞಾನಿಯಾಗಿ ಪರಮಾತ್ಮನ ಅವ್ಯಕ್ತ ಹಾಗೂ ಅನುತ್ತಮ ಸದದ ದರ್ಶನವನ್ನು ಪಡೆಯುವನು. ಸರ್ವಕಾಲದಲ್ಲಿ ಯೋಗಯುಕ್ತನಾಗಿರು', ಎಂಬ ಉಪದೇಶವೆ ಈ ಅಧ್ಯಾಯದ ಕೊನೆಯಲ್ಲಿರುವುದು.

### ೧೦೩ ರಾಜವಿದ್ಯೆಯು

ಒಂಬತ್ತನೆಯ ಅಧ್ಯಾಯದಲ್ಲಿಯೂ ಭಕ್ತಿಯ ಹಾಗೂ

ಜ್ಞಾನದ ವಿವರಣೆಯು ಇರುವದು. ಅದರ ಸಾರಾಂಶವೇನೆಂದರೆ, 'ಅಖಿಲ ವಿಶ್ವದಲ್ಲಿ ಒಂದು ಅವ್ಯಯ ಭಾವವು ವ್ಯಾಪ್ತವಿರುವದು. ಈಶ್ವರನು ಪ್ರಕೃತಿಯ ಆಧಾರದಿಂದ ಸೃಷ್ಟಿಯನ್ನು ನಿರ್ಮಿಸುವನು ಮತ್ತು ಸಂಹರಿಸುವನು. ಆದರೆ ಆ ಕರ್ಮದಲ್ಲಿ ಅನಾಸಕ್ತನಿರುವುದರಿಂದ ಅವನು ಬದ್ಧನಾಗುವದಿಲ್ಲ. ಸಾಮಾನ್ಯ ಮೂಢ ಮನುಷ್ಯನು ಈಶ್ವರನ ಪರಮರೂಪವನ್ನು ತಿಳಿದುಕೊಳ್ಳಲಾರನು. ಆದರೆ ಮಹಾತ್ಮರು ಅನನ್ಯಭಾವದಿಂದ ದೇವರನ್ನು ಭಜಿಸುವರು ಮತ್ತು ಯೋಗಯುಕ್ತರಿರುವರು. ಅವರು ದೇವಭಾವವನ್ನು ಹೊಂದುವರು. ಸಕಾಮ ಜನರು ದೇವರನ್ನು ಭಜಿಸಿದರೂ ಅವರಿಗೆ ಚಂಚಲ ಭೋಗಸುಖಗಳು ಮಾತ್ರ ದೊರಕುವವು. ಸಕಲ ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡಿದರೆ ಶುಭಾಶುಭ ಫಲಗಳಾವೂ ಬಾಧಿಸವು ಮತ್ತು ಕಡೆಗೆ ಭಕ್ತನು ಕರ್ಮಫಲಗಳ ಪೂರ್ಣ ಸನ್ಯಾಸವನ್ನು ಮಾಡಲು ಸಮರ್ಥನಾಗುವನು. ಅವನ ಬುದ್ಧಿಯು ಸಮವಾಗುವದು ಮತ್ತು ಅವನು ಮುಕ್ತನಾಗುವನು. ಇದೇ ಸುಲಭವಾದ ರಾಜವಿದ್ಯೆಯು ಅಥವಾ ರಾಜಗುಹ್ಯವು.'

### ೧೦ಳ ಪರಮಾತ್ಮನ ವಿಭೂತಿಗಳು

ತಾನು ಉಪದೇಶಿಸಿದ ಜ್ಞಾನದಿಂದ ಸಂತುಷ್ಟನಾದ ಅರ್ಜುನನನ್ನು ನೋಡಿ ಶ್ರೀಕೃಷ್ಣನು ಹತ್ತನೇ ಅಧ್ಯಾಯದಲ್ಲಿ ಮತ್ತೆ ಜ್ಞಾನ-ಭಕ್ತಿಗಳನ್ನು ಹೇಳುವನು. 'ಸತತ ಪ್ರೇಮಪೂರ್ವಕ ಭಕ್ತಿಯನ್ನು ಮಾಡುವವನು ಈಶ್ವರಾನುಗ್ರಹದಿಂದ

ಸಾಮ್ಯಬುದ್ಧಿಯನ್ನು ಪಡೆದು ಬುದ್ಧಿಯೋಗಿಯಾಗುವನು. ಬಳಿಕ ಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವನು.' ಅರ್ಜುನನು ಪರಮಾತ್ಮನ ವಿಭೂತಿಗಳನ್ನು ತಿಳಿಯಲಪೇಕ್ಷಿಸಲು ಶ್ರೀಕೃಷ್ಣನು ಅನೇಕ ವಿಭೂತಿಗಳನ್ನು ಹೇಳಿ ಕೊನೆಗೆ, 'ಐಶ್ವರ್ಯ, ಪ್ರಭಾವ ಮುಂತಾದವುಗಳಿಂದ ಪೂರ್ಣವಾದ ವಸ್ತುಗಳಲ್ಲೆಲ್ಲ ಈಶ್ವರಾಂಶವಿರುವದೆಂದು ತಿಳಿ; ಇಷ್ಟೇ ಅಲ್ಲ. ಈ ವಿಶ್ವಮಂಡಲವೆಲ್ಲ ಈಶ್ವರನ ಒಂದೇ ಒಂದು ಅಂಶದಿಂದ ಆಗಿರುವದು. ಈಶ್ವರನು ಅಪ್ರಮೇಯನೂ ಅಸೀಮನೂ ಇರುವನು,' ಎಂದು ಈಶ್ವರನ ಅನಂತತ್ವವನ್ನು ವರ್ಣಿಸುವನು.

### ೧೦೫ ವಿಶ್ವರೂಪವು

ಈಶ್ವರನ ವಿಭೂತಿಮತ್ತ್ವವನ್ನು ಕೇಳಿ ಅರ್ಜುನನು ಭಾವಾವಿಷ್ಟನಾಗಿ ವಿಶ್ವರೂಪ ದರ್ಶನದ ಇಚ್ಛೆಯನ್ನು ಪ್ರಕಟ ಮಾಡುವನು. ಆಗ ಶ್ರೀಕೃಷ್ಣನು ಅದನ್ನು ತೋರಿಸಿ ಅರ್ಜುನ ನಿಗೆ ಅನನ್ಯಭಕ್ತಿಯ ಮಹಾತ್ಮ್ಯವನ್ನು ಹೇಳುವನು. 'ಕರ್ಮ ಸರ್ವಸ್ವವು ಈಶ್ವರನದೇ, ಎಂದು ಕರ್ಮರತನಿರುವವನು ಆಸಕ್ತಿಯನ್ನಳಿದು, ಭೂತಮಾತ್ರರಲ್ಲಿ ನಿರ್ವೈರನಾಗಿ ವರ್ತಿಸು ವನು. ಇಂಥ ಭಕ್ತನು ಕಡೆಗೆ ಈಶ್ವರಭಾವವನ್ನು ಪಡೆಯು ವನು.'

### ೧೦೬ ವ್ಯಕ್ತೋಪಾಸನೆ

ಭಕ್ತಿಮಾರ್ಗದ ಮಹಿಮೆಯನ್ನು ಅರಿತುಕೊಂಡು ಅರ್ಜುನನು ಭಕ್ತಿಯ ರೀತಿಯನ್ನು ಕುರಿತು ಕೇಳುವನು. ಈಶ್ವರನ ವ್ಯಕ್ತಾವ್ಯಕ್ತ ಸ್ವರೂಪಗಳಲ್ಲಿ ಯಾವ ರೂಪದ

ಭಕ್ತಿಯು ಇಷ್ಟವು, ಎಂದು ಅರ್ಜುನನು ಕೇಳುವನು. ಆಗ ಶ್ರೀಕೃಷ್ಣನು, 'ಯಾವ ರೂಪದ ಭಕ್ತಿ ಮಾಡಿದರೂ ಫಲವು ಒಂದೇ. ಆದರೆ ಅವ್ಯಕ್ತಕ್ಕಿಂತ ವ್ಯಕ್ತೋಪಾಸನೆಯು ಹಗುರಾದುದು. ಪೂರ್ಣ ಈಶ್ವರಭಾವವನ್ನು ಪಡೆಯುವ ಅನೇಕ ಉಪಾಯಗಳಲ್ಲಿ ಕರ್ಮಫಲತ್ಯಾಗವು ಎಲ್ಲಕ್ಕೂ ಸುಲಭವಿದ್ದು ಶ್ರೇಷ್ಠವಿರುವದು,' ಎಂದು ಹೇಳಿ ಸ್ಥಿತಪ್ರಜ್ಞನನ್ನು ಹೊಗಳಿದಂತೆ ಕರ್ಮಪರಾಯಣ ಭಕ್ತನನ್ನು ಹೊಗಳಿ ಈ ಅಧ್ಯಾಯವನ್ನು ಕೊನೆಗಾಣಿಸುವನು.

### ೧೦೭ ಈ ದೇಹ ಮತ್ತು ದೇಹಸ್ಥ ಆತ್ಮನು

ಹದಿಮೂರನೆಯ ಅಧ್ಯಾಯದಲ್ಲಿ ಕ್ಷೇತ್ರಕ್ಷೇತ್ರಜ್ಞವಿಚಾರವೆಂಬ ಜ್ಞಾನಭಾಗದ ವಿವೇಚನೆ ಇರುವದು. ಮನುಷ್ಯನ ದೇಹವು ಕ್ಷೇತ್ರರೂಪವಿರುವದು, ಅದನ್ನರಿಯುವವನು ಕ್ಷೇತ್ರಜ್ಞನೆನಿಸುವನು, ಆವನು ಬ್ರಹ್ಮರೂಪನಿರುವನು. ಅಮಾನಿತ್ವ, ಅದಂಭಿತ್ವ, ಅಹಿಂಸೆ ಮುಂತಾದ ಗುಣಗಳು ಜ್ಞಾನಸಾಧನಗಳಿರುವವು. ಜ್ಞಾನಿಗೆ ಅವು ಸ್ವಾಭಾವಿಕವಿರುವವು. ಅವುಗಳಿಂದಲೆ ಜ್ಞಾನವಾಗುತ್ತಿರುವುದರಿಂದ ಗೀತೆಯು ಆ ಗುಣಗಳಿಗೆಯೆ ಜ್ಞಾನವೆಂದು ಹೆಸರು ಕೊಟ್ಟಿರುವುದು. ಬಳಿಕ ಬ್ರಹ್ಮನ ಸಗುಣ–ನಿರ್ಗುಣ ವರ್ಣನೆಯು ಉಪನಿಷತ್ತುಗಳಲ್ಲಿ ಇದ್ದಂತೆ ಗೀತೆಯಲ್ಲಿಯೂ ಇರುವದು. ಪ್ರಕೃತಿ ಪುರುಷರ ಆಚೆಗೆ ಇದ್ದ ಪರಬ್ರಹ್ಮನ ಅನುಭವಜ್ಞಾನದಿಂದ ಮುಕ್ತಿಯು ಕೈಗೂಡುವುದು, ಎಂದು ಈ ಅಧ್ಯಾಯದ ಕೊನೆಯಾಗುವುದು.

### ೧೦೪ ತ್ರಿಗುಣಗಳು

ಹದಿನಾಲ್ಕನೆಯ ಅಧ್ಯಾಯದಲ್ಲಿ ಪ್ರಕೃತಿಯ ಗುಣಗಳಾದ ಸತ್ವ, ರಜ, ತಮ ಇವುಗಳ ವರ್ಣನೆ ಇರುವದು. ತ್ರಿಗುಣಾತ್ಮಕ ಪ್ರಕೃತಿಯ ಮೂಲಕವೆ ಸೃಷ್ಟಿಯಲ್ಲಿ ನಾನಾತ್ವವು ಕಣ್ಣಿಗೆ ಬೀಳುವುದು. ಆತ್ಮನು ಗುಣಾತೀತನಿದ್ದು ಇವುಗಳಲ್ಲಿ ಸಿಲುಕುವುದಿಲ್ಲ, ಎಂಬ ನಿಜವನರಿತವರು ಕರ್ಮದಿಂದ ಬದ್ಧರಾಗರು. ಇಂಥ ಗುಣಾತೀತನು ಸ್ಥಿತಪ್ರಜ್ಞನಂತೆ ಇಲ್ಲವೆ ಭಕ್ತನಂತೆ ನಿರ್ವಿಷಯಿಯೂ ನಿಷ್ಕಾಮಿಯೂ ನಿರ್ವೈರನೂ ನಿರ್ಮಮನೂ ಇರುವನೆಂದು ಕೊನೆಗೆ ವರ್ಣನೆಯಿದೆ.

### ೧೦೯ ಪುರುಷೋತ್ತಮನು

ಹದಿನೈದನೆಯ ಅಧ್ಯಾಯದಲ್ಲಿ ಸಂಸಾರವು ಅಶ್ವತ್ಥ ವೃಕ್ಷಕ್ಕೆ ಹೋಲಿಸಲ್ಪಟ್ಟಿರುವುದು. ಅದಕ್ಕೂ ಮಹತ್ವದ ವಿಷಯವೆಂದರೆ, ಕ್ಷರಾಕ್ಷರಗಳಾಚೆಗೆ ಅವುಗಳ ಅಧೀಶ್ವರನಾದ ಪುರುಷೋತ್ತಮನಿರುವನು, ಅವನು ಎಲ್ಲಕ್ಕೂ ಶ್ರೇಷ್ಠನಿರುವನು, ಭಕ್ತಿಯಿಂದ ದೊರಕಿಸಲು ಸುಲಭನು, ಅವನನ್ನು ಪಡೆದವನು ಕೃತಕೃತ್ಯನು, ಎಂದು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದು.

### ೧೧೦ ದೈವಾಸುರ ಸಂಪತ್ತು

ಹದಿನಾರನೆಯದರಲ್ಲಿ ದೈವೀ ಮತ್ತು ಆಸುರೀ ಸಂಪತ್ತುಗಳ ವರ್ಣನೆಯಿರುವುದು. ಆಸುರೀ ಗುಣಗಳು ದುರ್ಗತಿದಾಯಕವಾದವುಗಳು. ಕಾಮ, ಕ್ರೋಧ, ಲೋಭ ಇವೇ ನರಕದ್ವಾರಗಳು ಎಂದು ಅದರಲ್ಲಿ ಉಲ್ಲೇಖವಿರುವದು.

### ೧೧೧ ಮಾಡಲೇಬೇಕಾದ ಕರ್ಮವು

ಶ್ರದ್ಧೆ, ಆಹಾರ, ಯಜ್ಞ, ದಾನ, ತಪ ಮುಂತಾದವು ಗಳೆಲ್ಲ ಮೂರುಗುಣಗಳಿಗನುಸಾರವಾಗಿ ಮೂಬಗೆಯವಿರುವ ವೆಂದು ಹದಿನೇಳನೆಯ ಅಧ್ಯಾಯದಲ್ಲಿ ಹೇಳಿದೆ. ಫಲಾಕಾಂಕ್ಷೆ ಇಲ್ಲದೆ ಕೇವಲ ಕರ್ತವ್ಯಬುದ್ಧಿಯಿಂದ ಯಜ್ಞಾದಿಗಳನ್ನು ಮಾಡುವುದೇ ಉತ್ತಮ ಪಕ್ಷ, ಎಂದು ಹೇಳುವುದು ಈ ಅಧ್ಯಾಯದ ಉದ್ದೇಶವು.

### ೧೧೨ ಉಪಸಂಹಾರವು

ತಾವು ಹೂಡಿದ ಕದನದ ಭಯಾನಕ ಪರಿಣಾಮದ ಕಲ್ಪನೆಗಳಿಂದ ಶೋಕಸಂತಪ್ತನಾಗಿ ವಿರಾಗದಿಂದ ಅರ್ಜುನನು ಸನ್ಯಾಸದೀಕ್ಷೆಯನ್ನು ಕೈಕೊಳ್ಳಲು ಸಿದ್ಧನಾಗಿದ್ದನು. ಶ್ರೀ ಕೃಷ್ಣನು ಈ ವೃತ್ತಿಯನ್ನು ಖಂಡಿಸಿ ಕರ್ಮಸನ್ಯಾಸಮಾಡದೆ ಫಲಾಶೆಯ ತ್ಯಾಗವನ್ನು ಮಾಡು, ಎಂದು ಹೇಳಿದನು. ಸನ್ಯಾಸ ಮತ್ತು ತ್ಯಾಗ ಇವುಗಳಲ್ಲಿಯ ಸಾಮ್ಯವನ್ನು ಗುರು ತಿಸಿ, ಇನ್ನು ಇವುಗಳಲ್ಲಿಯ ಭೇದಗಳನ್ನು ಸ್ಪಷ್ಟವಾಗಿ ತಿಳಿದು ಕೊಳ್ಳಬೇಕೆಂದು ಅರ್ಜುನನು ಹದಿನೆಂಟನೆಯ ಅಧ್ಯಾಯದ ಆರಂಭದಲ್ಲಿ ಪ್ರಶ್ನೆ ಮಾಡುವನು. ಈ ಅಧ್ಯಾಯದಲ್ಲಿಯೆ ಗೀತೋಪದೇಶದ ಉಪಸಂಹಾರವಿರುವುದು. ಶ್ರೀಕೃಷ್ಣನು ಅಂದದ್ದೇನಂದರೆ,'ಕಾಮನೆಗಳೊಡನೆ' ಕರ್ಮವನ್ನೂ ತ್ಯಜಿಸು ವದು ಸನ್ಯಾಸವೆನಿಸುವುದು; ಆದರೆ ಕರ್ಮಫಲಾಶೆಯ ತ್ಯಾಗ ವಷ್ಟೇ ವಿಹಿತವು, ಕರ್ಮತ್ಯಾಗವು ವಿಹಿತವಲ್ಲ, ಎಂದು ತ್ಯಾಗ ಮಾರ್ಗವು ಹೇಳುವುದು. ತ್ಯಾಗಮಾರ್ಗದಲ್ಲಿ ಕರ್ಮವು

ತ್ಯಾಜ್ಯವಿಲ್ಲ, ಇಷ್ಟೇ ಅಲ್ಲ, ಅದು ಕರ್ತವ್ಯವಿರುವುದು; ಸಂಗ ಹಾಗೂ ಫಲಾಶೆ ಇವಿಷ್ಟೇ ಈ ಮಾರ್ಗದಲ್ಲಿ ನಿಷಿದ್ಧವಾದವು ಗಳು. ಕರ್ಮಸರ್ವಸ್ವದ ತ್ಯಾಗವು ಅಶಕ್ಯವು, ಕರ್ಮಫಲಾಶೆಯ ತ್ಯಾಗವನ್ನು ಮಾಡುವವನೆ ತ್ಯಾಗಿಯೆನಿಸುವನು. ಹಮ್ಮಿಲ್ಲದೆ ಸಮಬುದ್ಧಿಯಿಂದ ಮಾಡಿದ ಯಾವದೇ ಕರ್ಮವು ಕರ್ತನನ್ನು ಕಟ್ಟಲಾರದು. ಎಲ್ಲೆಲ್ಲಿಯೂ ಒಂದೇ ಒಂದು ಅವಿಭಕ್ತ ಅವ್ಯಯ ಆತ್ಮವು ಇರುವುದೆಂಬ ಅರಿವನ್ನು ಮಾಡಿಕೊಂಡು, ಧೃತ್ಯುತ್ಸಾಹಪೂರ್ಣರಾಗಿ, ಸಂಗ-ರಾಗ–ದ್ವೇಷ ರಹಿತರಾಗಿ ಫಲಾಶೆಯನ್ನು ಬಿಟ್ಟು ಸ್ವಕರ್ಮವನ್ನು ಆಚರಿಸಿದರೆ ಅದು ಆತ್ಮಸುಖಕ್ಕೆ ಅಡ್ಡಿ ಮಾಡಲಾರದು. ಸ್ವಕರ್ಮದಿಂದಲೆ ಸರ್ವವ್ಯಾಪಿಯಾದ ಅಂತರ್ಯಾಮಿಯನ್ನು ಅರ್ಚಿಸಿ ಪ್ರತಿಯೊಬ್ಬನು ಪರಮ ಪದವನ್ನು ಪಡೆಯುವನು, ಆದುದರಿಂದ ಸಹಜವಾದ ಸ್ವಕರ್ಮವನ್ನು ಯಾರೂ ಬಿಡಕೂಡದು. ಪರಮಾತ್ಮನಿಗೆ ಶರಣಾಗತನಾಗಿ ಎಲ್ಲ ಕರ್ಮವನ್ನು ಮಾಡುತ್ತಲೆ ಅನುಗ್ರಹ ಪಡೆದು ಪರಮಶಾಂತಿಯನ್ನು ದೊರಕಿಸುವುದು ಯೋಗ್ಯವು.' ಶ್ರೀಕೃಷ್ಣನ ಈ ಪರಮ ವಚನದಿಂದ ಅರ್ಜುನನು ಮೋಹ ಮುಕ್ತನೂ ನಿಃಸಂದೇಹನೂ ಆಗಿ, ಸನ್ಯಾಸವನ್ನು ಸ್ವೀಕರಿಸುವ ವಿಚಾರವನ್ನು ಬಿಟ್ಟು, ತನ್ನ ಕರ್ಮವನ್ನು ಮಾಡಲು ಜ್ಜುಗಿಸುವನು ಹಾಗೂ ರಣಕಂದನಕ್ಕೆ ಪ್ರವೃತ್ತನಾಗುವನು. ಗ್ರಂಥಾರಂಭದಲ್ಲಿ ಎದುರಾದ 'ಕರ್ಮ ಮಾಡಬೇಕೊ, ಬಿಡಬೇಕೊ' ಎಂಬ ಪ್ರಶ್ನೆಗೆ 'ಕರ್ಮ ಮಾಡಬೇಕು' ಬಿಡಕೂಡದು.' ಎಂಬ ಸ್ಪಷ್ಟ ಉತ್ತರವು ಗ್ರಂಥಾಂತ್ಯದಲ್ಲಿ ಸಿಕ್ಕು

ವದು. ಅರ್ಜುನನ ಪ್ರಶ್ನೆಯನ್ನೆ ಎಲ್ಲರೂ ಕೇಳುವರು ಮತ್ತು ಅದಕ್ಕೆ ಕುರು ಕರ್ಮಣ್ಯೇವ (೪.೧೬) 'ಕರ್ಮವನ್ನೆ ಮಾಡು' ಎಂಬ ಉತ್ತರವನ್ನು ಗೀತೆಯು ಕೊಡುವದು.

**೧೧೩ ಸಮುಚ್ಚಯ ಯೋಗವು**

ಗೀತಾಧ್ಯಾಯಗಳಲ್ಲಿಯ ವಿಚಾರಾನುಕ್ರಮಗಳನ್ನು ಸಂಕ್ಷೇಪವಾಗಿ ನೋಡಿದಂತಾಯಿತು. ಇದರ ಮೇಲಿಂದ ಗೀತೆಯ ತಾತ್ಪರ್ಯವು ಸೂರ್ಯಪ್ರಕಾಶದಂತೆ ಸ್ಪಷ್ಟವಾಗುವದು. ಗೀತೆಯು ಕರ್ಮವನ್ನೆ ಮಾಡುವ ಉಪದೇಶವನ್ನು ಕೊಡುವುದು, ಆದರೆ ಗೀತೆಯು ಹೇಳುವ ಕರ್ಮವು ಕಾಮ್ಯವಲ್ಲ. ಅದು ಭಕ್ತಿಪರವಿರಬೇಕು, ಜ್ಞಾನಯುಕ್ತವಿರಬೇಕು ಮತ್ತು ಫಲಾಶಾರಹಿತವಿರಬೇಕು. ಪಟವಿಲ್ಲದೆ ಚಿತ್ರವು ಅಸಂಭವವು, ತೆರೆಯಿಲ್ಲದೆ ನಾಟ್ಯವು ಅಸಂಭವವು, ಹಾಗೆ ಕರ್ಮದ ವಿನಾ ಜೀವನವು ಅಸಂಭವವು. ಯಾವದಾಯುಷ್ಯ ಬಾಹ್ಯದಲ್ಲಿ ಕರ್ಮವು ಅನಿವಾರ್ಯವು. ಅಂತರದಲ್ಲಿ ಸದೈವ ಭಕ್ತಿ ಅಥವಾ ಅನಾಸಕ್ತಿ ಭಾವವಿದ್ದರೆ ಕ್ರಮವಾಗಿ ಆತ್ಮಸುಖವು ಅಂಕುರಿಸುವುದು. ವೀರ್ಯವತ್ತರವಾದ ಕರ್ಮಮಯ ಬಾಹ್ಯಜೀವನ, ಉತ್ಕಟ ಭಕ್ತಿ ಹಾಗೂ ಪೂರ್ಣ ಅನಾಸಕ್ತಿ ಈ ಭಾವದ್ವಯಮಯವಾದ ಅಂತರ್ಜೀವನ ಇವುಗಳ ಸಂಯೋಗದಿಂದ ಏಕಾತ್ಮಪ್ರತ್ಯಯವಾಗಿ, ಅಂತಃಸುಖದ ಸೆಲೆಯೊಡೆದು, ಮನುಷ್ಯನು ಕೃತಾರ್ಥನಾಗುವನು. ಈ ರೀತಿ ಗೀತೆಯಲ್ಲಿ ಕರ್ಮ, ಭಕ್ತಿ, ಜ್ಞಾನ ಇವು ಓತಪ್ರೋತವಾಗಿರುವವು.

## ೧೩ ಕೊನೆಮಾತು

### ೧೧೪ ಕರ್ಮಯೋಗವೆ ಪ್ರತಿಪಾದ್ಯವು

ಶ್ರೀಕೃಷ್ಣ ಮತ್ತು ಅರ್ಜುನ ಇವರ ನಡುವೆ ಆದ 'ಧರ್ಮಸಂವಾದ'ವನ್ನು ಗೀತೆಯಲ್ಲಿರುವ ಕ್ರಮದಂತೆ ಪೂರ್ಣವಾಗಿ ಆಲೋಚಿಸಿದರೆ ಅದರ ತಾತ್ಪರ್ಯವು ಕರ್ಮಯೋಗವೆ ಇರುವದೆಂಬುದು ಸ್ಪಷ್ಟವಾಗುವುದು. ಮೀಮಾಂಸಕರ ತರ್ಕಶುದ್ಧ ಪದ್ಧತಿಯಿಂದ ಗೀತೆಯ ವಿಷಯವನ್ನು ವಿಚಾರಿಸಿದರೂ ಕರ್ಮಯೋಗದ ಅಖಂಡ ತತ್ವವು ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವುದು ಮತ್ತು ಈ ತತ್ವವು ನ್ಯಾಯಯುಕ್ತವೂ ಅನುತ್ತಮವೂ ಇರುವದು ಎಂದು ಮನವರಿಕೆಯಾಗುವುದು. ಕರ್ಮಯೋಗವು ಸರಲವಿದ್ದು ಮನುಷ್ಯಸ್ವಭಾವಕ್ಕೆ ಅನುಕೂಲವಿರುವದು. ಇನ್ನು ಅದರ ಪ್ರತಿಪಾದನದಲ್ಲಿ ಹೆಚ್ಚು ವೇಳೆ ಕಳೆಯುವುದು ಅನವಶ್ಯಕವು. ಇದುವರೆಗೆ ಮಾಡಿದ ವಿವೇಚನೆಯ ಸಿಂಹಾವಲೋಕನ ಮಾಡಿ ಈ ನಿಬಂಧವನ್ನು ಮುಗಿಸುವ.

### ೧೧೫ ಕರ್ಮದ ನಿಜಸ್ವರೂಪವು

ಕರ್ಮವು ಬಂಧಕವಿರುವುದೆಂಬ ರೂಢವಿದ್ದ ಸಾಮಾನ್ಯ ಕಲ್ಪನೆಯ ಮೂಲಕ ಅದನ್ನು ತಪ್ಪಿಸಬೇಕೆಂದು ಕರ್ಮತ್ಯಾಗದ ವಿಚಾರವು ಮನಸಿನಲ್ಲಿ ಬರುವುದು. ಇನ್ನು ಕರ್ಮವು ಬಂಧಕವಿರುವುದೆಂಬುದರ ಅರ್ಥವೇನು, ಮತ್ತು ಆ ಬಂಧನದ ತೆರ

ವಾವುದು? ಕರ್ಮವು ಬಂಧಕವು ಎಂಬ ಕಲ್ಪನೆಯು ಮೊದಲು ಯಾಕೆ ಹುಟ್ಟಿತು? ನಿಜವಾಗಿ ನೋಡಿದರೆ ಕರ್ಮವು ಶಕ್ತಿಯು ಸ್ವಾಭಾವಿಕ ಆವಿರ್ಭಾವವು; ಅವ್ಯಕ್ತ ಕರ್ಮವೆ ಶಕ್ತಿಯು, ವ್ಯಕ್ತಶಕ್ತಿಯೆ ಕರ್ಮವು. ಎಲ್ಲಿಯು ವರೆಗೆ ಈ ಸೃಷ್ಟಿಯಲ್ಲಿ ಶಕ್ತಿ ಎಂಬುದಿರುವುದೊ—ಆ ಶಕ್ತಿ ಯಾಂತ್ರಿಕವಿರಲಿ, ನೈಸರ್ಗಿಕವಿರಲಿ, ಮಾನಸಿಕವಿರಲಿ, ಅದು ಜೀವನಶಕ್ತಿಯಿರಲಿ, ಆತ್ಮಿಕ ಶಕ್ತಿಯಿರಲಿ—ಅಲ್ಲಿಯು ವರೆಗೆ ಕರ್ಮವು ಅವ್ಯಾಹತವಾಗಿ ನಡೆಯುವುದೆ. ಆದುದರಿಂದ ಕರ್ಮವು ಯಾಕೆ ಅಥವಾ ಹೇಗೆ ಹುಟ್ಟಿತು ಎಂದು ಕೇಳುವುದೂ ಈ ಸೃಷ್ಟಿ ಅಥವಾ ಅದರ ಮೂಲದಲ್ಲಿರುವ ಶಕ್ತಿ ಯಾಕೆ ಹುಟ್ಟಿತು ಎಂದು ಕೇಳುವುದೂ ಒಂದೇ, ಅರ್ಥಾತ್ ಕರ್ಮವು ಅನಾದಿ ಮತ್ತು ಅನಂತವಿದ್ದು ಅದು ಅವ್ಯಾಹತವಾಗಿ ನಡೆಯುವುದು ಮತ್ತು ಅನಿವಾರ್ಯವಿರುವುದು. ಮನುಷ್ಯನು ಒಂದು ಬಗೆಯ ನಿತ್ಯ ಅಖಂಡ ಸುಖವನ್ನರಸುವನು. ಕರ್ಮವು ಅವನ ಚಿತ್ತವನ್ನು ವ್ಯಗ್ರಮಾಡುವುದರಿಂದ ಆ ಸುಖಕ್ಕೆ ಅದು ಅಡ್ಡ ಬಂದಂತೆ ಕಾಣುವುದು ಮತ್ತು ಬಂಧಕವೆನಿಸುವುದು. ಕ್ರಿಯೆಯು ಪ್ರತಿಕ್ರಿಯೆಯು ಹೇಗೊ ಹಾಗೆ ಕರ್ಮದ ಫಲವು ಅದರ ಬೆನ್ನು ಬಿಡದಿರುವುದರಿಂದ ಕರ್ಮವು ಬಂಧಕವಿರುವುದು, ಎಂದು ಮನುಷ್ಯನು ಎನ್ನುವನು. ಅದೇ ರೀತಿ, ಮೋಕ್ಷವೆಂದರೆ ಬಾಹ್ಯಕರ್ಮದಿಂದ ಬಿಡುಗಡೆ, ಮತ್ತು ಜನ್ಮ ಮರಣ ಚಕ್ರದಿಂದ ಪಾರಾಗಿ ಎಲ್ಲಿಯಾದರೂ ಒಂದೆಡೆ ಸ್ವಸ್ಥ ಐಕ್ಯ ಭಾವದಿಂದ ಆನಂದದಲ್ಲಿರುವಿಕೆ, ಎಂಬ ಕಲ್ಪನೆಯು ರೂಢ

ವಾದುದರಿಂದ ಎಲ್ಲ ಕರ್ಮವು ನಮ್ಮನ್ನು ಪುನಃ ಪುನಃ ಹುಟ್ಟು ಸಾವುಗಳಿಗೆ ಈಡುಮಾಡುವುದರಿಂದ ಅದು ಬಂಧಕವು, ಎಂಬ ವಿಚಾರವು ಜನಮನದಲ್ಲಿ ಬೇರೂರಿದೆ. ಯಥಾರ್ಥವಾಗಿ ನೋಡಿದರೆ ಕರ್ಮವು ಸ್ವಾಭಾವಿಕವು, ಅನಿವಾರ್ಯವು, ಅವ್ಯಾಹತವು. ಕರ್ಮವು ಸ್ವತಃ ಬಂಧಕವಿಲ್ಲ, ಅದರಲ್ಲಿರುವ ನಮ್ಮ ಮಮತ್ವವು ನಮ್ಮನ್ನು ಬಂಧಿಸುವುದು. ಇದರ ಅರ್ಥವೇನಂದರೆ, ನಾವು ನಮ್ಮ ಅಹಂಕಾರದಿಂದ ಬದ್ಧರು, ನಮ್ಮ ಅಹಂನಾಶದಿಂದ ಮುಕ್ತರು. ಆದುದರಿಂದಲೆ ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ಎಂಬ ಶಾಸ್ತ್ರವು ಪ್ರಸಿದ್ಧವಿರುವುದು. ನಿಃಶೇಷ ಕರ್ಮತ್ಯಾಗವು ಅಶಕ್ಯವು, ಕೇವಲ ಕರ್ಮತ್ಯಾಗದಿಂದ ಮುಕ್ತಿಯು ದುರ್ಲಭವು. ಕರ್ಮವು ಸೃಷ್ಟಿಧರ್ಮವು, ದೇಹಸ್ವಭಾವವು. ಈಶ್ವರನು ಸಹ ಸೃಷ್ಟಿಕರ್ತನಿರುವುದರಿಂದ ಕರ್ಮಮಯನಿರುವನು, ಆದುದರಿಂದ ಕರ್ಮತ್ಯಾಗದ ವಿಚಾರವೇ ವ್ಯರ್ಥವಿರುವುದು. ಕರ್ಮವು ಸ್ವತಃ ಬಂಧಕವಿಲ್ಲ; ಭಾವನೆಯಂತೆ ಬಂಧ ಮೋಕ್ಷಗಳು ಸಂಭವಿಸುವವು, ಅವು ಅಂತಃಕರಣದ ಧರ್ಮಗಳು. ಕರ್ಮ ಬಿಟ್ಟು ಕುಳಿತರೂ ಆಂತರಿಕ ಕಲ್ಪನೆಗಳು ಮನುಷ್ಯನಿಗೆ ಸುಖದುಃಖಗಳನ್ನುಂಟು ಮಾಡುವವು. ಉಸುರಾಡಿಸಬೇಕೊ ಬಾರದೊ, ಉಣಬೇಕೊ ಬಾರದೊ, ಎಂಬ ಪ್ರಶ್ನೆಗಳು ಎಷ್ಟು ಅವಾಸ್ತವ ಮತ್ತು ವ್ಯರ್ಥವಿರುವವೊ ಅಷ್ಟೇ ಕರ್ಮ ಮಾಡಬೇಕೊ ಬಾರದೊ, ಎಂಬ ಪ್ರಶ್ನೆಯು ನಿರರ್ಥಕವಿರುವುದು. ಮನು

ಷ್ಯನು ಜ್ಞಾನಿಯಿರಲಿ, ಅಜ್ಞಾನಿಯಿರಲಿ, ಅವನು ಆಜೀವನ ಕರ್ಮವನ್ನು ಮಾಡಲೇಬೇಕಾಗುವುದು. ನಿಜವಾಗಿ ವಿಚಾರಕ್ಕೆ ಯೋಗ್ಯವಾದ ವಿಷಯವೆಂದರೆ, ಯಾವ ಪ್ರಕಾರದ ಕರ್ಮ ಮಾಡಬೇಕು, ಮತ್ತು ಯಾವ ರೀತಿ ಮಾಡಬೇಕು ಎಂಬುದು. ಈ ಪ್ರಶ್ನೆಗೆ ಕರ್ಮಯೋಗವು ಸಮರ್ಪಕ ಉತ್ತರವನ್ನು ಕೊಡುವುದು. ಎಲ್ಲರೂ ಎಲ್ಲಬಗೆಯ ಕರ್ಮಗಳನ್ನು ಮಾಡ ಲಾರರು, ಅವರು ತಮ್ಮ ತಮ್ಮ ಗುಣಕರ್ಮ ಮತ್ತು ಪರಿ ಸ್ಥಿತಿಗನುಸಾರವಾಗಿ ಕರ್ಮ ಮಾಡುವರು. ಸದ್ಬುದ್ಧಿಯಿಂದ ನಿಶ್ಚಯಿಸಿದ ಅಂಥ ಕರ್ಮವೆ ಕರ್ತವ್ಯವೆನಿಸುವುದು. ಅದೇ ಅವರ ಸ್ವಕರ್ಮ ಮತ್ತು ಅದೇ ಅವರ ಸ್ವಧರ್ಮ. ಸ್ವಕ ರ್ಮದ ಆಚರಣೆಯಲ್ಲಿ ಶ್ರಮವು ಅಲ್ಪ, ಕ್ಲೇಶವು ಕಡಿಮೆ; ಸ್ವಶಕ್ತಿಯ ಮರ್ಯಾದೆಯಲ್ಲಿದ್ದು ಮನುಷ್ಯನು ಸ್ವಕರ್ಮ ಮಾಡುವುದರಿಂದ ವ್ಯರ್ಥ ಕಾಲಾಪವ್ಯಯವೂ ಆಗದು. ಸೂರ್ಯನು ಬೆಳಕನ್ನು ಬೀರುವಂತೆ, ಹಣ್ಣು ಮರದಿಂದ ಕೆಳಕ್ಕೆ ಬೀಳುವಂತೆ, ತಾಯಿಯ ಮೊಲೆಯುಂಡು ಮಗುವು ನಲಿದಾ ಡುವಂತೆ ಸ್ವಕರ್ಮವು ಸಹಜವು, ಲೀಲಾವಿಷಯವು, ಅಂತ ರ್ಗತ ಸುಪ್ತಶಕ್ತಿಯ ಆವಿರ್ಭಾವವು. ಸ್ವಕರ್ಮ ಮಾಡು ತ್ತಿರುವಾಗ ವಿವಿಧ ಪ್ರಸಂಗಗಳು ಬರುವವು. ಅವುಗಳನ್ನು ಯಥಾಶಕ್ತಿ ದಾಟಲು ಯತ್ನಿಸುವುದು ನಮ್ಮ ಕರ್ತವ್ಯವಿರು ವುದು. ಆದರೆ ಅವುಗಳಲ್ಲಿ ಮಮತ್ವವುಳ್ಳವರಾಗಿ ನಾವು ಪರವಶರಾಗಕೂಡದು. ಮಮತ್ವದಿಂದ ಮೋಹವುಂಟಾಗು ವುದು, ಮೋಹದಿಂದ ಸಾಗಿದರೆ ರಾಗದ್ವೇಷಗಳುತ್ಪನ್ನವಾಗು

ವವು, ಫಲದಲ್ಲಿ ಆಸಕ್ತಿ ಹುಟ್ಟಿ ಅದರ ಬಗ್ಗೆ ಮನಸು ವಿಹ್ವಲ ವಾಗುವುದು, ಮತ್ತು ಸುಖದ ಬದಲು ದುಃಖವೇ ಪರಿಣಮಿಸುವುದು. ಕರ್ಮದ ಸಂಗ, ಅದರ ಆಚರಣದಲ್ಲಿ ರಾಗದ್ವೇಷ, ಮತ್ತು ಅದರ ಫಲವನ್ನು ಕುರಿತು ಆಶೆ, ಇವು ಕರ್ತನ ಭಾವನೆಯನ್ನು ಕಲುಷಿತ ಮಾಡಿ ಕರ್ಮಬಂಧನವನ್ನು ನಿರ್ಮಾಣ ಮಾಡುವವು. ಕರ್ಮಫಲದ ಆಶೆ–ಆಕಾಂಕ್ಷೆ ಇಲ್ಲದಿದ್ದರೆ ಕರ್ಮಮಾಡುವಾಗ ರಾಗದ್ವೇಷಗಳುಂಟಾಗುವುದಿಲ್ಲ, ಕರ್ಮದಲ್ಲಿ ಸಿಲುಕಿ ಬೀಳುವ ಮೋಹವಾಗುವುದಿಲ್ಲ, ಧೃತಿ ಉತ್ಸಾಹಗಳು ಕುಂದುವುದಿಲ್ಲ, ಇಷ್ಟಾನಿಷ್ಟಗಳ ಚಿಂತೆಯು ಅಂತಃಕರಣದ ಸಮತೆಯನ್ನು ಕೆಡಿಸುವುದಿಲ್ಲ. ಸರ್ವ ಕರ್ಮವನ್ನು ಈ ರೀತಿ ಮಾಡುವುದಕ್ಕೆ ಅನಾಸಕ್ತಿ ಎನ್ನುವರು, ಇದೇ ಕರ್ಮಯೋಗವು. ಪೂರ್ಣ ಯೋಗಸ್ಥಿತಿಯು ಆತ್ಮೌಪಮ್ಯ ಭಾವನೆಯಿಲ್ಲದೆ ಅಳವಡದು. ತನ್ನಲ್ಲಿ, ಪರರಲ್ಲಿ, ಅಖಿಲ ವಿಶ್ವದಲ್ಲಿ ಒಂದೇ ಅವ್ಯಯ ಆತ್ಮಭಾವವು ತುಂಬಿದೆ, ಎಂಬ ಸತ್ಯ ಸಾಕ್ಷಾತ್ಕಾರವಾಗದೆ 'ತನ್ನಂತೆ ಪರರ ಬಗೆಯುವ' ಸ್ವಭಾವವು ನೆಲೆಗೊಳ್ಳದು, ಸ್ವಪರಭಾವವು ನಷ್ಟವಾಗದು. ಒಮ್ಮೆ ಈ ದಿವ್ಯ ಭಾವವು ಅಂತಃಕರಣದಲ್ಲಿ ಮನೆಮಾಡಿಕೊಂಡಿತೆಂದರೆ, ರಾಗದ್ವೇಷಗಳು ನಿರ್ಮೂಲವಾಗುವವು, ಕರ್ಮವು ಸಮತೆಯಿಂದ ಕೈಗೂಡುವುದು, ಕರ್ಮಬಂಧನವು ಕಟ್ಟದು, ಮತ್ತು ಅಂತಃಸುಖವು ಅಚ್ಚಳಿಯದೆ ಉಳಿಯುವುದು.

### ೧೧೬. ಕರ್ಮ ಮಾಡುವ ಯುಕ್ತಿಯು

ನಮಗೆ ಕರ್ಮವು ಬಿಟ್ಟದ್ದಲ್ಲ, ಕರ್ಮಕ್ಕೆ ಅದರ ಫಲವು

ಬಿಟ್ಟಿದ್ದಲ್ಲ. ಜನನ ಮರಣದಂತೆ ಅಥವಾ ಹಗಲಿರುಳಿನಂತೆ ಅವು ಒಂದನ್ನೊಂದು ಬೆನ್ನಟ್ಟುವವು. ಕರ್ಮವು ಬರಿಯ ವೈಯಕ್ತಿಕವಿಲ್ಲ, ಅನ್ಯರು ಮಾಡಿದ ಕರ್ಮದ ಫಲಭೋಗ ವನ್ನು ಸಹ ನಾನು ಉಣ್ಣಬೇಕಾಗುತ್ತಿದೆ. ಕರ್ಮವು ಸಹಜವು, ಸ್ವಾಭಾವಿಕವು, ಅನಿವಾರ್ಯವು. ಅಕರ್ಮವು ಸಹ ನಮ್ಮನ್ನು ಭೋಗದಿಂದ ಮುಕ್ತರನ್ನಾಗಿಡಲರಿಯದು. ಆಂದಬಳಿಕ ಕರ್ಮ ಮಾಡಬಾರದು ಅಥವಾ ಆದಷ್ಟು ಕಡಿಮೆ ಕರ್ಮ ಮಾಡಬೇಕು ಎಂಬ ಅಸ್ವಾಭಾವಿಕ ಮತ್ತು ನಿರರ್ಥಕ ಹಟವನ್ನು ಬಿಟ್ಟು ಕರ್ಮಮಾಡುವ ನಿಶ್ಚಯವನ್ನು ಮಾಡು ವುದೇ ವ್ಯವಹಾರ್ಯವು, ಯುಕ್ತಿಯುಕ್ತವು, ಯೋಗ್ಯವು ಮತ್ತು ಈಶಸಂಕಲ್ಪಾನುಸಾರವು. ಇನ್ನು ಪರಮ ಸುಖವು ನಮ್ಮಿಂದ ತೊಲಗದಂತೆ ಕರ್ಮ ಮಾಡಬೇಕು ಎಂಬುದು ಸರಿಯು. ಅಂಥ ಯುಕ್ತಿಯನ್ನು ನಮಗೆ ಅನಾಸಕ್ತಿಯು ಅಥವಾ ಕರ್ಮಯೋಗವು ಹೇಳಿಕೊಡುವುದು. ಈ ಅನಾ ಸಕ್ತಿ ಎಂಬುದು ವಿಚಾರದಿಂದ ಅಥವಾ ಚಿಂತನದಿಂದ ಮತ್ತು ಮನೋನಿಗ್ರಹದಿಂದ ಪ್ರಾಪ್ತವಾಗುವಂತೆ ಭಕ್ತಿಯಿಂದಲೂ ದೊರೆಕೊಳ್ಳುವುದು. ಚಿಂತನ ಅಥವಾ ಧ್ಯಾನಮಾರ್ಗದಲ್ಲಿ ಮನುಷ್ಯನು ಸ್ವಾವಲಂಬಿಯಾಗಬೇಕಾಗುತ್ತಿದೆ. ಆದರೆ ಜನಸಮಾಜವು ಸಾಮಾನ್ಯವಾಗಿ ಯಾವದೊಂದು ಆಶ್ರಯ ವನ್ನು ಅಪೇಕ್ಷಿಸುವುದು. ಆ ಸಮಾಜಕ್ಕೆ ಭಕ್ತಿಮಾರ್ಗವು ಈಶ್ವರನೆಂಬ ಸರ್ವಾಶ್ರಯವನ್ನು ಕಲ್ಪಿಸಿಕೊಡುವುದು. ಅನನ್ಯ ಭಕ್ತನು ತಾನು ಕೇವಲ ನಿಮಿತ್ತಮಾತ್ರನೆಂದು, ಸ್ವಕರ್ಮ

ವೆಲ್ಲ ಪರಮಾತ್ಮನ ಕರ್ಮವೆಂದು ತಿಳಿದು ಕರ್ಮಫಲವನ್ನು ಅವನಿಗೇ ಅರ್ಪಿಸುವನು. ಈ ಸಾಧನೆಯ ಮೂಲಕ ಆ ಭಕ್ತನಿಗೆ ಅನಾಸಕ್ತಿಯ ಅಭ್ಯಾಸವಾಗುವುದು. ಅದರಿಂದ ಬುದ್ಧಿಯು ಸಮವಾಗಿ ಮೆಲ್ಲಮೆಲ್ಲನೆ ಆತ್ಮೌಪಮ್ಯ ಭಾವವು ಅವನಲ್ಲಿ ಹುಟ್ಟುವುದು ಮತ್ತು ಅವನು ಮಾಡಿದ ಕರ್ಮವು ಬಂಧಕವಾಗದೆ ಆತ್ಮಸುಖಕ್ಕೆ ಸಹಾಯಕವಾಗುವುದು. ಗೀತಾನುಯಾಯಿಯು ಕರ್ಮಕ್ಷೇತ್ರದಲ್ಲಿ ಲೀಲೆಯಿಂದ ವಿಹರಿಸುವನು ಮತ್ತು ಅಂತರದಲ್ಲಿ ಆತ್ಮಭಾವವನ್ನು ಅನುಭವಿಸುವನು; ಇದು ದೇವಭಾವ, ದಿವ್ಯಭಾವ, ಅಥವಾ ಈಶ್ವರಭಾವ ಎಂದೂ ಎನಿಸುವುದು.

### ೧೧೭ ಕರ್ಮಯೋಗವು ಸರ್ವರಿಗೂ ಹಿತಕರವು

ವ್ಯಕ್ತಿಯು ಸಾಮಾಜಿಕ ಪ್ರಾಣಿಯಿರುವುದರಿಂದ, ಸಮಾಜದೊಡನೆ ಅವನು ಸೂಕ್ಷ್ಮಬಂಧನಗಳಿಂದ ಬದ್ಧನು. ಅವನು ಮಾಡಿದ ಕರ್ಮಗಳನ್ನು ಸಮಾಜವು, ಸಮಾಜವು ಮಾಡಿದ ಕರ್ಮಗಳನ್ನು ಅವನು ಭೋಗಿಸಬೇಕಾಗುವುದು. ಅವನು ಸ್ವತಃ ಎಷ್ಟು ಕರ್ಮತ್ಯಾಗವನ್ನು ಮಾಡಲು ಹವಣಿಸಿದರೂ ಸಮಾಜಕರ್ಮದ ಫಲವು ಅವನನ್ನು ಬಿಡದು. ಆದುದರಿಂದ ಅವನು ಅಕರ್ಮರತನಿರದೆ ಸತ್ಕರ್ಮ-ಸ್ವಕರ್ಮನಿರತನಾಗಬೇಕು, ಅಂದರೆ ಸಮಾಜವೂ ಅದೇ ಮಾರ್ಗದಿಂದ ಸಾಗುವುದು; ಒಂದೊಪ್ಪತ್ತು ಹಾಗಾಗದಿದ್ದರೂ ಕನಿಷ್ಟ ಪಕ್ಷಕ್ಕೆ ತಾನಾದರೂ ಸತ್ಫಲಗಳು ಬರುವಂತೆ ಕರ್ಮಮಾಡಿದಂತಾಗುವುದು, ಎಂದು ಗೀತೆಯ ಉಪದೇಶವಿರುವುದು. ಕರ್ಮ

ಯೋಗವು ವ್ಯಷ್ಟಿಗೆ ಹಾಗೂ ಸಮಷ್ಟಿಗೆ ಸಮವಾಗಿ ಹಿತಕರ ವಿರುವುದು. ಅದು ನಮಗೆ ಇದೇ ಜೀವನದಲ್ಲಿ ಈ ಕ್ಷಣಕ್ಕೆ ಅಂತಃಸುಖವನ್ನು ದೊರಕಿಸಿಕೊಡಬಲ್ಲದು. ಅದೇ ಕಾಲಕ್ಕೆ ಸಮಾಜವನ್ನು ಅದು ವ್ಯವಸ್ಥಿತ ಹಾಗೂ ಉಜ್ವಲ ಸ್ಥಿತಿಯಲ್ಲಿ ಡುವುದು. ವ್ಯಕ್ತಿಯ ಅಂತರದಲ್ಲಿ ನಿರಂತರ ಸುಖಸಾಮ್ರಾಜ್ಯ ವನ್ನು ನೆಲಿಸಿ ಸಾಮ್ಯಬುದ್ಧಿಯು ಸಮಾಜದಲ್ಲಿ ಸತತ ಸ್ವಧ ರ್ಮಾಚರಣೆಯ ಸ್ವಚ್ಛ ಕಿರಣಗಳನ್ನು ಪಸರಿಸುವುದು, ಮತ್ತು ವ್ಯಕ್ತಿ ಸಮಾಜಗಳೆರಡನ್ನೂ ಈ ಕಂಟಕಮಯ ಕರ್ಮಪಥ ದಲ್ಲಿ ಆತಂಕವಿಲ್ಲದಂತೆ ನಡೆಸುವದು. ಸಾಮ್ಯಾವಸ್ಥೆಯೆ ಬುದ್ಧಿಯ ಶ್ರೇಷ್ಠ ಪದವಿಯು, ಆ ಅವಸ್ಥೆಯಲ್ಲಿದ್ದು ಮಾಡಿದ ನಿರ್ಣಯವೆ ನಿರ್ದೋಷವು ಮತ್ತು ಆ ಅವಸ್ಥೆಯೆ ನೀತಿ ನಿಯಮಗಳ ಉಗಮವು.

### ೧೧೮ ಧಾರ್ಮಿಕ ಕರ್ಮವೆಂದರೇನು?

ಕರ್ಮವು ತಾನು ಸದೋಷವೂ ಅಲ್ಲ, ನಿರ್ದೋಷವೂ ಅಲ್ಲ. ಕರ್ತನ ಬುದ್ಧಿಯಂತೆ ಅದು ದೋಷಪೂರ್ಣ ಅಥವಾ ದೋಷರಹಿತವಾಗುವುದು ಮತ್ತು ಧರ್ಮ ಅಥವಾ ಅಧರ್ಮ ವೆನಿಸುವುದು. ಆದುದರಿಂದ ಧರ್ಮವು ಭಾವನಾಸ್ವರೂಪ ವಿರುವುದು. ನಾನು ಅನ್ಯರಿಗೆ ಏನನ್ನಾದರೂ ಕೊಟ್ಟರೆ ಅದು ಒಂದು ಕರ್ಮವಾಗುವುದು; ಆದರೆ ನನ್ನ ಭಾವನಾನುಸಾರ ವಾಗಿ ಅದು ದಾನ, ವ್ಯಾಪಾರ, ಧರ್ಮ, ಅಧರ್ಮ ಇವುಗಳಲ್ಲಿ ಯಾವುದಾದರೂ ಆಗಬಲ್ಲದು. ಯಾವದೊಂದು ಕರ್ಮದ ಧಾರ್ಮಿಕತೆಯನ್ನು ಅದರ ಬಾಹ್ಯರೂಪಿನಿಂದ ನಿಶ್ಚಯಿಸು

ವುದು ತಪ್ಪಾಗುವುದು; ಹಾಗೆ ಮಾಡಿದರೆ, ಹೆಚ್ಚು ಹಣವನ್ನು ದಾನ ಕೊಟ್ಟವನು ಹೆಚ್ಚು ಧಾರ್ಮಿಕ, ಹಾಗೂ ಕಡಿಮೆ ಕೊಟ್ಟವನು ಕಡಿಮೆ ಧಾರ್ಮಿಕ, ಎಂದೆನ್ನುವ ಅನವಸ್ಥೆಯು ಪ್ರಾಪ್ತವಾಗುವುದು, ಮತ್ತು ಧರ್ಮವು ಕೇವಲ ಪಾರ್ಥಿವ ಜಡವಸ್ತುಗಳಲ್ಲಿಯೆ ಇರುವುದೆನ್ನಬೇಕಾಗುವುದು. ಆದರೆ ಧರ್ಮಸ್ವರೂಪವನ್ನು ನಿಶ್ಚಯಿಸುವಾಗ ಈ ದೃಷ್ಟಿಯು ಸಲ್ಲದು. ಧರ್ಮದ ನಿಜ ನಿಲವು ಹೊರಗಣ ವಸ್ತುಗಳಲ್ಲಿರದೆ ಕರ್ತನ ಒಳಗಣ ಬುದ್ಧಿಯಲ್ಲಿರುವುದು. ಯಾವನ ಬುದ್ಧಿಯು ಸಮವಿದ್ದು ಆತ್ಮೌಪಮ್ಯಭಾವವುಳ್ಳದ್ದೊ ಅದೇ ಧರ್ಮ ಬುದ್ಧಿಯು ಮತ್ತು ತದನುಸಾರ ಮಾಡಿದ ಕರ್ಮವೆ ಪೂರ್ಣ ಧಾರ್ಮಿಕವು. ಸಮದರ್ಶಿ ಪುರುಷನ ಅಂತರದಲ್ಲಿ ಉಕ್ಕಿದ ವಿಚಾರಗಳೆ ಕರ್ಮರೂಪದಿಂದ ಹೊರಹೊಮ್ಮಿದವೆಂದರೆ ಲೋಕಕ್ಕೆ ಹಿತಕರವಾಗುವವು, ಅವೇ ವಿಧಿನಿಷೇಧಗಳ ಮೇರೆ ಗಳಾಗುವವು, ಮತ್ತು ಸಮಾಜರಚನೆಗೆ ಸಹಾಯಮಾಡು ವವು. ಚಾತುರ್ವರ್ಣ್ಯ ವ್ಯವಸ್ಥೆಯಂಥ ವ್ಯವಸ್ಥೆ ಇದ್ದಲ್ಲಿ ಮಾತ್ರ ಸಾಮ್ಯಬುದ್ಧಿಯ ವಿಕಾಸವಾಗುವುದೆಂದು ಯಾರೂ ತಿಳಿಯಕೂಡದು. ಸಾಮ್ಯಬುದ್ಧಿಯ ಪ್ರತಾಪದಿಂದ ಯಾವ ದೊಂದು ಒಳ್ಳೇ ಸಮಾಜವ್ಯವಸ್ಥೆಯು ಘಟಿಸುವುದು ಹೊರ್ತು ಸ್ವತಃ ಸಾಮ್ಯಬುದ್ಧಿಗೆ ಯಾವುದೊಂದು ವ್ಯವಸ್ಥೆಯ ಅಪೇಕ್ಷೆಯಿಲ್ಲ. ಬೇಕಾದಂಥ ಸ್ಥಿತಿಯಲ್ಲಿ ಆ ಬುದ್ಧಿಯ ವಿಕಾಸವಾಗಬಲ್ಲದು. ಬೇಕಾದವರು, ಬೇಕಾದಲ್ಲಿ, ಸರ್ವತ್ರ ಮತ್ತು ಸರ್ವದಾ ಸರ್ವರು ಕರ್ಮಯೋಗವನ್ನು ಆಚರಿಸ

ಬಹುದು. ಇಷ್ಟು ಈ ತತ್ವವು ವ್ಯಾಪಕವೂ ಸನಾತನವೂ ಸರ್ವಮಯವೂ ಇರುವುದು.

### ೧೧೯ ಕರ್ಮರೂಪ ಹಾಗೂ ಕರ್ಮತತ್ವ

ಕರ್ಮದ ಬಾಹ್ಯರೂಪದಿಂದ ಕರ್ಮತತ್ವವು ಬೇರೆ ಇರುವುದು. ಗೀತೆಯು ಕರ್ಮತತ್ವವನ್ನು ವಿಚಾರಿಸುವುದು. ಕರ್ಮರೂಪವು ನಶ್ವರ ಮತ್ತು ಭಂಗುರವಿದ್ದರೂ ಕರ್ಮತತ್ವವು ಅವಿನಾಶಿಯಿರುವುದು. ಈ ತತ್ವದ ಆಚರಣೆಯಿಂದ ವ್ಯಕ್ತಿ ಹಾಗೂ ಸಮಾಜಗಳ ಹಿತವನ್ನು ಯಾವಾಗಲೂ ಸಾಧಿಸುವುದು ಶಕ್ಯವು. ಅದರ ಆಧಾರದಿಂದ ರಚಿಸಿದ ವಿಧಿ ನಿಷೇಧಪರ ನಿಯಮಗಳು ದೇಹದಂತೆ ಜೀರ್ಣವಾಗಿ ಸತ್ತುಹೋಗಬಹುದು; ಆದರೆ ತತ್ವರೂಪ ಆತ್ಮನು ಶಾಶ್ವತನಿದ್ದು ಪುನಃ ಹೊಸ ದೇಹಗಳನ್ನು ತಾಳಬಲ್ಲನು. ಧಾರಣಾತ್ ಧರ್ಮಃ- ಧಾರಣೆ ಮಾಡುವ ಮೂಲಕ ಧರ್ಮ ಎಂಬ ಹೆಸರು ಬಂದಿರುವುದು. ಆದುದರಿಂದ ಯಾವ ವಿಧಿನಿಷೇಧಗಳೊಳಗಿಂದ ಆ ಧಾರಣಾಶಕ್ತಿಯು ಮಾಯವಾಗಿದೆಯೊ ಅವುಗಳಲ್ಲಿಯ ಧರ್ಮಶಕ್ತಿಯೂ ನಷ್ಟವಾಗಿದೆ ಎಂದು ಹೇಳಬಹುದು. ಆ ಬಳಿಕ ಅವು ಹೆಣದಷ್ಟೇ ತ್ಯಾಜ್ಯವು. ಪೂಜ್ಯರ ಚೇತನಾರಹಿತ ದೇಹಗಳು ಸಹ ಮಸಣಕ್ಕೇ ಈಡಲ್ಲವೆ? ಕರ್ಮತತ್ವದ ಜ್ಞಾನವು ಹೊಸಹೊಸ ಕರ್ಮಗಳಿಗೆ ಧರ್ಮಸ್ವರೂಪವನ್ನು ಕೊಡುವ ಸಾಮರ್ಥ್ಯವನ್ನು ಕರ್ಮಯೋಗಿಗೆ ಕೊಡುವುದು. ಗೀತೆಯು ಅದೇ ಮಹತ್ಕಾರ್ಯವನ್ನು ಮಾಡುವುದು. ಗೀತೆಯು ಕರ್ಮಮರ್ಮದ ವಿಚಾರ ಮಾಡುವುದು, ಮತ್ತು

ಲೋಕಹಿತಕಾರಕ ಕರ್ಮಕ್ಕೆ ಧಾರ್ಮಿಕತೆಯನ್ನುಂಟುಮಾಡುವ ಶಕ್ತಿಗೆ ಯೋಗವೆನ್ನುವದು; ಆದುದರಿಂದಲೆ ಗೀತೆಯು ಕರ್ಮಯೋಗಶಾಸ್ತ್ರವೆಂಬ ಹೆಸರನ್ನು ಪಡೆದಿರುವುದು. ಪ್ರತಿಯೊಂದು ಅಧ್ಯಾಯದ ಸಂಕಲ್ಪದಲ್ಲಿದ್ದ 'ಕರ್ಮಯೋಗಶಾಸ್ತ್ರ' ಎಂಬ ಪ್ರಯೋಗವು ಗೀತೆಯ ಸತ್ಯಸ್ವರೂಪವನ್ನೆ ಬಣ್ಣಿಸುವುದು.

### ೧೨೦ ಇದೇ ಶ್ರೇಷ್ಠರ ಮಾರ್ಗವು

ವ್ಯವಹಾರದಲ್ಲಿ ಕರ್ಮದ ಎರಡು ವಿಭಾಗಗಳನ್ನು ಮಾಡುವರು—ನಿಃಶ್ರೇಯಸಕರ ಮತ್ತು ಅಭ್ಯುದಯಕರ. ಆದರೆ ಕರ್ಮವು ಸಣ್ಣದಿರಲಿ, ದೊಡ್ಡದಿರಲಿ, ಸಾಂಸಾರಿಕವಿರಲಿ ಪಾರಮಾರ್ಥಿಕವಿರಲಿ, ಅದರ ಪರಿಣಾಮವು ಕರ್ತನ ಮನಸಿನ ಮೇಲೆ ಆಗೇ ತೀರುವುದು. ಸಾಮಾನ್ಯ ದೃಷ್ಟಿಯಿಂದ ಕರ್ಮಗಳ ವಿಭಾಗ ಮಾಡುವುದು ಎಷ್ಟೇ ಉಪಯುಕ್ತವಿದ್ದರೂ ಅಂತಃಸುಖ ಅಥವಾ ಆತ್ಮಸುಖದ ದೃಷ್ಟಿಯಿಂದ ಕರ್ಮವು ಒಂದೇ ಒಂದು. ಯಾವದೇ, ಎಂತಹದೇ ಕರ್ಮವಿದ್ದರೂ ಅದರ ಬಗ್ಗೆ ಕರ್ತನ ಭಾವನೆಯು ಒಂದೇ ಬಗೆಯದ್ದಿರಬೇಕು. ಅದರ ಹೊರತು ಅಖಂಡ ಅಂತಃಸುಖವು ಸ್ಥಿರವಾಗದು. ಒಮ್ಮೆ ಭಾವಿಕತೆಯಿಂದ ಇನ್ನೊಮ್ಮೆ ಅಭಾವಿಕತೆಯಿಂದ ಕರ್ಮವನ್ನು ಮಾಡುವುದು, ಮಹತ್ವದ ಕರ್ಮಗಳಲ್ಲಿ ಆತ್ಮಾಪಮ್ಯ ಭಾವನೆಯನ್ನು ಇಡುವುದು ಸಣ್ಣ ಕರ್ಮಗಳನ್ನು ಕುರಿತು ಔದಾಸಿನ್ಯ ತಾಳುವುದು, ಹೀಗೆ ಮಾಡುವುದು ಸಿದ್ಧಿಯ ಮಾರ್ಗವಲ್ಲ. ಆದುದರಿಂದಲೆ ಗೀತೆಯು ಜೀವನ

ದಲ್ಲಿಯು ಪ್ರತಿಯೊಂದು ಕರ್ಮವನ್ನು ಅನಾಸಕ್ತಿಯಿಂದ ಮತ್ತು ಕೃಷ್ಣಾರ್ಪಣಬುದ್ಧಿಯಿಂದ ಮಾಡತಕ್ಕದ್ದೆಂದು ಹೆಜ್ಜೆಜ್ಜೆಗೆ ಉಪದೇಶಿಸುವುದು. ಈ ಉಪದೇಶವನ್ನು ಜಾತಿ ಮತ ಪಂಥಗಳ ಭೇದವಿಲ್ಲದೆ ಗೀತೆಯು ಇಡೀ ಮಾನವವಂಶಕ್ಕೆ ಮಾಡಿರುವುದು. ಗೀತಾಧರ್ಮವು ಎಲ್ಲರಿಗೂ ಅಭಯವನ್ನು ಕೊಡುವುದು. ಯಾಜ್ಞವಲ್ಕ್ಯನು ಜನಕರಾಜನಿಗೆ, ಅಭಯಂ ವೈ ಪ್ರಾಪ್ತೋಽಸಿ—ನೀನು ಅಭಯಪದವನ್ನು ಪಡೆದಿರುವಿ —ಎಂದು ಹೇಳಿರುವಂತೆ ಗೀತೆಯಲ್ಲಿ, ನ ಮೇ ಭಕ್ತಃ ಪ್ರಣಶ್ಯತಿ—ನನ್ನ ಭಕ್ತನು ಕೇಡಿಗೀಡಾಗನು, ಮೋಕ್ಷಯಿಷ್ಯಾಮಿ ಮಾ ಶುಚಃ–ನಾನು ನಿನ್ನನ್ನು ಮುಕ್ತಮಾಡುವೆನು,ಶೋಕಿಸಬೇಡ, ಎಂದು ಶ್ರೀಕೃಷ್ಣನು ಎಲ್ಲರಿಗೂ ವರವನ್ನು ಕೊಟ್ಟಿರುವನು. ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ (೨.೪೦) ಈ ಧರ್ಮದ ಅಲ್ಪಸೇವನವು ಸಹ ಸಾಧಕನನ್ನು ಮಹದ್ಭಯದಿಂದ ಕಾಪಾಡುವುದು, ಎಂಬ ಶ್ರೀಕೃಷ್ಣನ ಉಕ್ತಿಯನ್ನು ಎಲ್ಲರೂ ಸ್ವಾನುಭವದಿಂದ ಸಾಕ್ಷಾತ್ಕರಿಸಬಹುದು. ಈ ಅಮೃತವಾಣಿಯನ್ನು ಕೇಳಿ ನಿರಾಶ, ನಿರ್ಜೀವ, ನಿಸ್ತೇಜರಾದವರೆಲ್ಲರೂ ಎದ್ದು ಇದರಂತೆ ವರ್ತಿಸಬೇಕು ಮತ್ತು ಅಂತಃಸುಖವನ್ನು ಅಚ್ಚಳಿಯದೆ ಕಣ್ಣಮುಂದೆ ಇಟ್ಟುಕೊಂಡು ಶ್ರೀ, ವಿಜಯ, ನೀತಿ, ಊರ್ಜಿತಾವಸ್ಥೆ ಇವುಗಳನ್ನು ಪಡೆಯಬೇಕು. ಇವುಗಳಿಂದ ತಾವು ಧನ್ಯರಾದಂತೆ ಶಾಂತಿ, ಪುಷ್ಟಿ, ತುಷ್ಟಿಗಳನ್ನು ನೆಲೆಗೊಳಿಸಿ ಸಮಾಜವನ್ನು ಧನ್ಯಗೊಳಿಸಬೇಕು.

ಓಂ ಶಾಂತಂ ಶಿವಂ ಸುಂದರಂ

# ತಿದ್ದುಪಡಿ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೬ | ೪ | ಏನು···ಬೇಕು. | ಏನನ್ನು···ಬೇಕು. |
| ೧೬ | ೫ | ಏನು···ಬೇಕು | ಎನನ್ನು···ಬೇಕು |
| ೧೯ | ೨೨ | ೧೦೯ | ೧೦೮ |
| ೨೦ | ೧೯ | ೫೩ | ೬೩ |
| ೩೧ | ೧೯ | ೩೪೭ | ೩೪೮ |
| ೩೩ | ೨೨ | ಅಪೂರ್ವ | ಅಪೂರ್ವ |
| ೪೭ | ೧೭ | ಪ್ರತಿಪಾದ | ಪ್ರತಿಪಾದಿ |
| ೫೦ | ೭ | | |
| ೫೭ | ೧ | ತ್ಯವು | ಅಗತ್ಯವು |
| ೬೨ | ೬ | ಹೆಸರು | ಹೆಸರನ್ನು |
| ೭೫ | ೫ | (೧೨–೨೧) | (೧೨–೧೧) |
| ೭೮ | ೧೩ | ಆತ್ಮೌಪಮ್ಯೈತೆ | ಆತ್ಮೌಪಮ್ಯತೆ |
| ೭೯ | ೨೦ | ಉಕ್ತ...ಗಿವದು | ಉಕ್ತ...ಗಿರುವದು |
| ೮೦ | ೧೫ | ಉಳಿಯುವದು | ಉಳಿಯುವದು; |
| ೮೨ | ೧ | ಶ್ರೇಷ್ಠತೆಯು | ಶ್ರೇ···ಯನ್ನು |
| ೯೧ | ೧ | (೧೩.೭–೧೧) | (೧೩.೮–೧೨) |
| ೯೬ | ೧೧ | (೧೩.೨೪) | (೧೩.೨೫) |
| ೯೭ | ೨೦ | ಆಶ್ಯಮ | ಆಶ್ರಮ |
| ೧೧೧ | ೧೦ | ವಿದ್ವಂಸಕ | ವಿಧ್ವಂಸಕ |
| ೧೪೩ | ೧೧ | ಯಾ...ರೊಂದು | ಯಾ...ರೊಂದನ್ನು |
| ೧೫೬ | ೨ | ೧೬ | ೧೫ |

## ಶ್ರೀ. ರಂಗನಾಥ ದಿವಾಕರರ

### ಮಾರಲಿಕ್ಕೆ ದೊರೆಯುವ ಗ್ರಂಥಗಳು

| | | |
|---|---|---|
| ೧. | ಗೀತೆಯ ಗುಟ್ಟು | ೧– ೦–೦ |
| ೨. | ಉಪನಿಷತ್ ಪ್ರಕಾಶ ಭಾಗ ೧. | ೦–೧೨–೦ |
| ೩. | ಉಪನಿಷತ್-ಪ್ರಕಾಶ ಭಾಗ ೨. | ೦–೧೨–೦ |
| ೪. | ರಾಮಕೃಷ್ಣ ಚರಿತಾಮೃತ | ೧– ೨–೦ |
| ೫. | ಕರ್ಮಯೋಗ | ೦–೧೨–೦ |
| ೬. | ವೇದಾಂತಶಾಸ್ತ್ರದ ಪೂರ್ವಪೀಠಿಕೆ | ೩– ೪–೦ |
| ೭. | ಉಪನಿಷತ್-ರಹಸ್ಯ | ೧– ೮–೦ |
| | ( ಶ್ರೀ. ಬೇಂದ್ರೆ, ಜೋಶಿಯವರೊಂದಿಗೆ. ) | |

ದೊರೆಯುವ ವಿಳಾಸ:—

ಹ. ಭೀ. ಹೊಸೂರ

ಅಧ್ಯಾತ್ಮ ಕಾರ್ಯಾಲಯ

ಧಾರವಾಡ

